CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೩, ೨೦೦೪ (ಜೇಷ್ಠ ೧೩, ಶಕ ವರ್ಷ ೧೯೨೬) | ಸಂಚಿಕೆ ೨೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ, ಶೇಷಾದ್ರಿಪುರಂ ಪೊಲೀಸ್ ಠಾಣೆ, ಬೆಂಗಳೂರು ನಗರ**

**ನಂ. ಸಿ1ಪಿಎಸ್/ಸಿಸಿ/155/2004, ದಿನಾಂಕ: 10ನೇ ಮೇ 2004**

**ಗೌರವಾನ್ವಿತ 8ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ, ಬೆಂಗಳೂರು ಮಹಾನಗರ**

**ನಿವೇದನೆ,**

**ವಿಷಯ:** ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದೆ ಬಾಕಿ ಉಳಿದಿರುವ ಮಾಲುಗಳ ಮತ್ತು ದ್ವಿಚಕ್ರ ವಾಹನಗಳನ್ನು ವಿಲೇವಾರಿ ಮಾಡುವ ಕುರಿತು ಮನವಿ.

**ಉಲ್ಲೇಖ:** 1) ಶೇಷಾದ್ರಿಪುರಂ ಪೊಲೀಸ್ ಠಾಣೆ ಮೊ.ಸಂ.344/1990 ಪಿ.ಎಫ್. ನಂ.29/91, ಮೊ.ಸಂ.17/2002, ಪಿ.ಎಫ್. ನಂ.7/2002, ಮೊ.ಸಂ.67/2002, ಪಿ.ಎಫ್ ನಂ.21/2002.

2) ಸಿಮೀಸ್ ನಂ.461/2002, ಪಿ.ಎಫ್.ನಂ.86/02, 756/02-144/02, 186/03-23/03, 343/03-40/03, ಯುಡಿಆರ್ ನಂ.22/91 ಪಿಎಫ್ ನಂ.182/91.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ 1990, 1991, 2002, 2003ನೇ ಸಾಲಿಗೆ ಸಂಬಂಧಪಟ್ಟ ಈ ಕೆಳಕಂಡ ಮಾಲು ಮತ್ತು ದ್ವಿಚಕ್ರ ವಾಹನಗಳನ್ನು ವಾರಸುದಾರರಿಲ್ಲವೆಂದು ಅಮಾನತ್ತುಪಡಿಸಿಕೊಂಡಿದ್ದು, ಈ ಮಾಲು ಮತ್ತು ವಾಹನಗಳನ್ನು ಪತ್ತೆ ಮಾಡುವ ಸಲುವಾಗಿ ಬೆಂಗಳೂರು ನಗರದ ಎಲ್ಲಾ ಠಾಣೆಗಳಿಗೆ ಸುತ್ತೋಲೆ ಕಳುಹಿಸಿದ್ದು, ಸದರಿ ಮಾಲು ಮತ್ತು ವಾಹನಗಳ ಬಗ್ಗೆ ಇದುವರೆಗೂ ವಾರಸುದಾರರು ಪತ್ತೆಯಾಗಿರುವುದಿಲ್ಲ. ಹಾಗೂ ನಗರದ ಎಲ್ಲಾ ಆರ್.ಟಿ.ಓ. ಕಛೇರಿಗಳಲ್ಲಿ ವಾಹನಗಳ ವಾರಸುದಾರರನ್ನು ಪತ್ತೆ ಮಾಡಲಾಗಿ ಕಛೇರಿ ದಾಖಲಾತಿಗಳಲ್ಲಿ ಮಾಹಿತಿ ಇರುವುದಿಲ್ಲ.

ಆದ್ದರಿಂದ ವಾರಸುದಾರರಿಲ್ಲದ ಮಾಲು ಮತ್ತು ವಾಹನಗಳ ಮಾಲೀಕರುಗಳನ್ನು ಪತ್ತೆ ಮಾಡುವ ಸಲುವಾಗಿ "ಕರ್ನಾಟಕ ಪ್ರಪತ್ರ" ದಲ್ಲಿ ಅಧಿಸೂಚನೆಯನ್ನು ಹೊರಡಿಸಲು ಮಾನ್ಯ ನ್ಯಾಯಾಲಯದ ಮುಖೇನ ಆದೇಶಿಸಬೇಕೆಂದು ಘನ ನ್ಯಾಯಾಲಯದಲ್ಲಿ ಕೋರಿಕೊಂಡಿರುತ್ತೆ.

ಹಾಗೂ ಇದರೊಂದಿಗೆ ನಗರದ ಎಲ್ಲಾ ಠಾಣೆಗಳಿಗೆ ಮಾಹಿತಿಗಾಗಿ ಕಳುಹಿಸಿದ ಅಸಲು ಸುತ್ತೋಲೆಯನ್ನು ಲಗತ್ತಿಸಿ ನಿವೇದಿಸಿಕೊಂಡಿರುತ್ತೆ.

| ಕ್ರ.ಸಂ. | ಮೊ.ಸಂ. | ಪಿ.ಎಫ್.ನಂ. | ಮಾಲುಗಳ ವಿವರ | ಚಾರ್ಸಿಸ್ ನಂ. | ಇಂಜಿನ್ ನಂ. |
|---|---|---|---|---|---|
| 1 | 344/90 | 29/91 | ಲೂನಾ ಮೊಫೆಡ್ ಸಿ.ಎ.ಆರ್-350 | - | - |
| 2 | 17/02 | 07/02 | ಹೀರೋ ಪುಚ್ ಕೆಎ-01-ಕೆ-721 | - | - |
| 3 | 67/02 | 21/02 | ಯಮಹ ಎಂ/ಸಿ ಸಿ.ಟಿ.ಡಿ-3303 | ಐ.ಎಲ್.ಐ.086308 | ಐ.ಎಲ್.ಐ.086308 |

| ಕ್ರ.ಸಂ. | ಮೊ.ಸಂ. | ಪಿ.ಎಫ್.ನಂ. | ಮಾಲುಗಳ ವಿವರ | ಚಾರ್ಸಿಸ್ ನಂ. | ಇಂಜಿನ್ ನಂ. |
|---|---|---|---|---|---|
| 4 | ಸಿಮೀಸ್ ನಂ.461/02 | 86/02 | ಬಜಾಜ್ ಸ್ಕೂಟರ್ ಎಂ.ವೈ.ಆರ್-7366 | - | - |
| 5 | ಸಿಮೀಸ್ ನಂ.756/02 | 144/02 | ಹಳೇ ಸಿಮನ್ಸ್ ಮೊಬೈಲ್ ಫೋನ್ | - | - |
| 6 | ಸಿಮೀಸ್ ನಂ.186/03 | 23/03 | ಒಂದು ಆರ್.ಎಕ್ಸ್ ಯಮಹ ಮೋಟರ್ ಸೈಕಲ್, ನಂ.ಸಿ.ಕೆಎನ್-4082 | ಐ.ಎಲ್.ಐ.087654 | ಐ.ಎಲ್.ಐ.087654 |
| 7 | ಸಿಮೀಸ್ ನಂ.343/03 | 40/03 | ಒಂದು ಕಪ್ಪು ವ್ಯಾನಿಟಿ ಬ್ಯಾಗ್ ನಗದು ಹಣ 1435/- ರೂ. ಒಂದು ಹೊಡೆದ ಕನ್ನಡಕ | - | - |
| 8 | ಯು.ಡಿ.ಆರ್. ನಂ.22/91 | 182/91 | ನಗದು ಹಣ 38-60 ಪೈಸೆ, ಒಂದು ಎಚ್.ಎಂ.ಟಿ. ಕೈ ಗಡಿಯಾರ, 8.500 ಗ್ರಾಂ ಚಿನ್ನದಂತಿರುವ ಉಂಗುರ, 1.250 ಗ್ರಾಂ ಚಿನ್ನದಂತಿರುವ ಮೂಗುತಿ | - | - |

**ಎಸ್.ಆರ್.ಎಲ್. ಗೌಡ**

ಪಿ.ಆರ್. 736

ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ,
ಶೇಷಾದ್ರಿಪುರಂ ಪೊಲೀಸ್ ಠಾಣೆ, ಬೆಂಗಳೂರು.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ, ವಿಜಾಪುರ,**
**ಪ್ರಕಟಣೆ ಸಂಖ್ಯೆ: ಜಿಸಕ:ಲೆಕ್ಕ:ಕಾಪಅ:ಸಿಆರ್:04-05, ದಿನಾಂಕ: 11ನೇ ಮೇ 2004**

ಸಮಾಜ ಕಲ್ಯಾಣ ಇಲಾಖೆಯಿಂದ ಸನ್ 2004-2005ನೇ ಸಾಲಿಗಾಗಿ ಪರಿಶಿಷ್ಟಜಾತಿ ಹಾಗೂ ಪರಿಶಿಷ್ಟವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ವಿಜಾಪೂರ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡಗಳ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಸದರಿ ಯೋಜನೆಯಡಿ ತರಬೇತಿ ಹೊಂದಲು ಅರ್ಜಿಗಳನ್ನು ಸಲ್ಲಿಸ ಬಯಸುವ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಗಳನ್ನು ಹೊಂದಿದವರು ಆಗಿರತಕ್ಕದ್ದು.

1. ಸದರಿ ಯೋಜನೆಯಡಿ ಅರ್ಜಿದಾರರು ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು. ಹಾಗೂ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದ ಈಚೆಗೆ ಕಾನೂನು ಪದವಿಯನ್ನು ಪಾಸು ಮಾಡಿರಬೇಕು. ಅಂದರೆ 2002-2003 ಮತ್ತು 2003-2004 ರಲ್ಲಿ ಜರುಗಿದ ಅಂತಿಮ ಕಾನೂನು ಪರೀಕ್ಷೆಗಳಲ್ಲಿ ಪಾಸಾದವರು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರಾಗಿರುತ್ತಾರೆ.
2. ವಕೀಲಿ ವೃತ್ತಿಯನ್ನು ನಡೆಸಲು ಅರ್ಹತೆಯನ್ನು ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು.
3. ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ಗರಿಷ್ಠ ವಯಸ್ಸು 35ಕ್ಕೆ ಮೀರಿರಬಾರದು.
5. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ಮಧ್ಯದಲ್ಲಿ ತರಬೇತಿ ಬಿಟ್ಟು ಹೋಗಬಾರದು. ಒಂದು ವೇಳೆ ಬಿಟ್ಟು ಹೋದಲ್ಲಿ ಶಿಷ್ಯ ವೇತನದ ಮೊತ್ತವನ್ನು ಕಂದಾಯ ಬಾಕಿ ಅಂತಾ ವಸೂಲು ಮಾಡಲಾಗುವುದು.
6. ತರಬೇತಿಯ ಅವಧಿ 4 ವರ್ಷದ್ದು ಆಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯ ಅವಧಿಯಲ್ಲಿ ಪ್ರತಿ ತಿಂಗಳು ರೂ.1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಶಿಕ್ಯೂಟರ್:ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲಿ ನಡೆಸಿದ ಖಾಸಗಿ ವಕೀಲರ ಬಳಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಭರ್ತಿ ಮಾಡಿ ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಜನ್ಮ ದಾಖಲೆಯ ಕುರಿತು ಎಸ್ಎಸ್ಎಲ್‌ಸಿ ಅಂಕಪಟ್ಟಿ ಬಾರ್ ಅಸೋಷಿಯೇಶನ್ನ ಸದಸ್ಯತ್ವ ಪ್ರಮಾಣ ಪತ್ರ, ಕಾನೂನು ಪದವಿ ಪಾಸ್ ಮಾಡಿದ ಅಂಕಪಟ್ಟಿ ಮುಂತಾದ ಶೈಕ್ಷಣಿಕ ಅರ್ಹತೆ ಕುರಿತಂತೆ ದೃಢೀಕೃತ ಪ್ರಮಾಣ ಪತ್ರಗಳೊಂದಿಗೆ ದಿನಾಂಕ: 10.6.2004ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ವಿಜಾಪೂರ ಇವರಿಗೆ ಅರ್ಜಿ ತಲುಪುವಂತೆ ಸಲ್ಲಿಸಬೇಕು. ಮಾನ್ಯ ಜಿಲ್ಲಾಧಿಕಾರಿಗಳವರ ಅಧ್ಯಕ್ಷತೆಯಲ್ಲಿ ಸರ್ಕಾರದಿಂದ ರಚಿತವಾಗಿರುವ ಆಯ್ಕೆ ಸಮಿತಿಯು ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು. ಅರ್ಜಿ ನಮೂನೆ ಮತ್ತು ಇತರೇ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯ ಹಳೆಯ ಜಿಲ್ಲಾ ಪಂಚಾಯತ್ ಕಟ್ಟಡ ಆನಂದ ಮಹಲ್ ಹತ್ತಿರ ವಿಜಾಪೂರ ಇಲ್ಲಿ ಸಂಪರ್ಕಿಸಿ ಪಡೆಯಬಹುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಹಾಗೂ ಸದಸ್ಯ-ಕಾರ್ಯದರ್ಶಿಗಳು

ಪಿ.ಆರ್. 737

ಕಾನೂನು ಪದವೀಧರರ ಆಡಳಿತ ನ್ಯಾಯಾಧೀಕರಣ ಆಯ್ಕೆ ಸಮಿತಿ, ವಿಜಾಪುರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-12:2004**

**ಅರ್ಜಿದಾರರು:** 1) ಶ್ರೀ ಎನ್.ಹೆಚ್. ರಂಗೇಗೌಡ ಬಿನ್ ಹನುಮೇಗೌಡ, 53 ವರ್ಷ
2) ಶ್ರೀಮತಿ ತಿಮ್ಮಮ್ಮ ಕೋಂ ಎ.ಹೆಚ್. ರಾಮೇಗೌಡ, 45 ವರ್ಷ,
ವಾಸ: ನ್ಯಾಮನಹಳ್ಳಿ ಗ್ರಾಮ, ಹಳೇಕೋಟೆ ಹೋಬಳಿ, ಹೊಳೇನರಸೀಪುರ ತಾಲ್ಲೂಕು.

**ಪ್ರತಿವಾದಿಗಳು:** 1) ಶ್ರೀ ಶಿವಶಂಕರ ಬಿನ್ ರಂಗೇಗೌಡ, ನ್ಯಾಮನಹಳ್ಳಿ, ಹಳೇಕೋಟೆ ಹೋಬಳಿ, ಹೊಳೇನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ.
2) ಮೆ: ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ನಿ., ಪಿ.ಬಿ.ನಂ.112, ಮಂಜುನಾಥ ಕಾಂಪ್ಲೆಕ್ಸ್, ಬಸ್‌ಸ್ಟ್ಯಾಂಡ್ ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮಂಜುನಾಥ ಉ: ಮಂಜುನಾಥಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 6.2.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 740 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-11:2004**

**ಅರ್ಜಿದಾರರು:** 1) ಶ್ರೀ ರಂಗೇಗೌಡ ಉರುಫ್ ಮುದ್ದಣ್ಣ, ಬಿನ್ ಕಳಸೇಗೌಡ, 50 ವರ್ಷ
2) ಶ್ರೀಮತಿ ಜವರಮ್ಮ ಕೋಂ ರಂಗೇಗೌಡ ಉರುಫ್ ಮುದ್ದಣ್ಣ, 45 ವರ್ಷ
ವಾಸ: ಅಗಿಲೇ ಗ್ರಾಮ ಮತ್ತು ಅಂಚೆ, ಹಾಸನ ತಾಲ್ಲೂಕು ಮತ್ತು ಹಾಸನ ಜಿಲ್ಲೆ.

**ಪ್ರತಿವಾದಿಗಳು:** 1) ಶ್ರೀ ಎ.ಎಂ. ಲೋಕೇಶ ಬಿನ್ ಮಾಳಿಗೇಗೌಡ, ಈಶ್ವರ ದೇವಾಲಯದ ಎದುರು, ತಣ್ಣೀರುಹಳ್ಳಿ ಬಡಾವಣೆ, ಗುಡ್ಡೇನಹಳ್ಳಿ ಕೊಪ್ಪಲು, ಹಾಸನ ಬೇಲೂರು ರಸ್ತೆ, ಹಾಸನ ತಾಲ್ಲೂಕು.
2) ದಿ ನ್ಯೂ ಇಂಡಿಯಾ ಇನ್‌ಶ್ಯೂರೆನ್ಸ್ ಕಂಪನಿ ಲಿ., ಹೇಮಾ ಮ್ಯಾನ್ಸನ್, ಗಾಂಧಿ ಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಚನ್ನೇಗೌಡ ಉರುಫ್ ಕುಮಾರ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 2.2.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 741 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-8:2004**

**ಅರ್ಜಿದಾರರು:** 1) ಶ್ರೀ ನಿಂಗಪ್ಪ ಅಲಿಯಾಸ್ ಮುತ್ತಣ್ಣ ಬಿನ್ ಲೇಟ್ ನಿಂಗಪ್ಪ, 40 ವರ್ಷ
2) ಶ್ರೀಮತಿ ಕಮಲಮ್ಮ ಕೋಂ ನಿಂಗಪ್ಪ ಅಲಿಯಾಸ್ ಮುತ್ತಣ್ಣ, 36 ವರ್ಷ
3) ಹರೀಶ್ ಬಿನ್ ನಿಂಗಪ್ಪ ಅಲಿಯಾಸ್ ಮುತ್ತಣ್ಣ, 15 ವರ್ಷ. 4) ಅಭಿಲಾಷ್ ಬಿನ್ ನಿಂಗಪ್ಪ ಅಲಿಯಾಸ್ ಮುತ್ತಣ್ಣ, ವಾಸ: ಚಿಚ್ಚನಹಳ್ಳಿ, ಕಸಬಾ ಹೋಬಳಿ, ಹೊಳೇನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ.

**ಪ್ರತಿವಾದಿಗಳು:** 1) ದಿ ಮ್ಯಾನೇಜಿಂಗ್ ಡೈರೆಕ್ಟರ್ (ಎಂ.ಡಿ.) ನಂ.40:41, ಕಾವೇರಿ ಕಂಪೆನಿ, ಬ್ಯಾಟರಾಯನಪುರ, ಮೈಸೂರು ರಸ್ತೆ, ಬೆಂಗಳೂರು-560019.
2) ದಿ ಮ್ಯಾನೇಜರ್, ನಂ.40:41, ಕಾವೇರಿ ಕಂಪೆನಿ ಕನ್‌ಸ್ಟ್ರಕ್ಷನ್ಸ್, ಬ್ಯಾಟರಾಯನಪುರ, ಮೈಸೂರು ರೋಡ್, ಬೆಂಗಳೂರು-560019.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಧರ್ಮ ಅಲಿಯಾಸ್ ರವಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 12.9.2001 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 742 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-7:2004**

**ಅರ್ಜಿದಾರರು:** 1) ಶ್ರೀಮತಿ ಕೋಮಲ ಉರುಫ್ ವಿನೋದ ಕೋಂ ಲೇಟ್ ಹೆಚ್.ಆರ್. ವಿರೂಪಾಕ್ಷ, ಸುಮಾರು 35 ವರ್ಷ ವಯಸ್ಸು

2) ಶಿವಕುಮಾರ್ ಬಿನ್ ಲೇಟ್ ಹೆಚ್.ಆರ್. ವಿರೂಪಾಕ್ಷ, ಸುಮಾರು 16 ವರ್ಷ ವಯಸ್ಸು.

3) ಭುವನೇಶ್ವರಿ ಬಿನ್ ಲೇಟ್ ಹೆಚ್.ಆರ್. ವಿರೂಪಾಕ್ಷ, ಸುಮಾರು 14 ವರ್ಷ ವಯಸ್ಸು.

ವಾಸ: ಹೊಸಮಠ ಗ್ರಾಮ, ಮಗ್ಗೆ ಅಂಚೆ, ಕೆ. ಹೊಸಕೋಟೆ ಹೋಬಳಿ, ಆಲೂರು ತಾಲ್ಲೂಕು.

**ಪ್ರತಿವಾದಿಗಳು:** 1) ಶ್ರೀ ರಮೇಶ್, ಭಾರತಿ ಎಸ್ಟೇಟ್ ಮಾಲೀಕರು, ಹೊಸಮಠ ಗ್ರಾಮ, ಮಗ್ಗೆ ಅಂಚೆ, ಕೆ. ಹೊಸಕೋಟೆ ಹೋಬಳಿ, ಆಲೂರು ತಾಲ್ಲೂಕು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹೆಚ್.ಆರ್. ವಿರೂಪಾಕ್ಷ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.5.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 743 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-23:2003**

**ಅರ್ಜಿದಾರರು:** 1) ಶ್ರೀ ರಾಮನಾಯಕ ಬಿನ್ ಕೃಷ್ಣ ನಾಯ್ಕ, ಸುಮಾರು 55 ವರ್ಷ ವಯಸ್ಸು

2) ಶ್ರೀಮತಿ ಜಯಬಾಯಿ ಕೋಂ ರಾಮನಾಯ್ಕ, ಸುಮಾರು 50 ವರ್ಷ ವಯಸ್ಸು

ವಾಸ: ಹಂಗರಹಳ್ಳಿ ಗ್ರಾಮ ದುದ್ದ ಹೋಬಳಿ, ಹಾಸನ ತಾಲ್ಲೂಕು.

**ಪ್ರತಿವಾದಿಗಳು:** ಶ್ರೀ ದೇವರಾಜು ಬಿನ್ ನಂಜುಂಡೇಗೌಡ, ಸುಮಾರು 38 ವರ್ಷ, ತವರದೇವರಕೊಪ್ಪಲು, ಕಸಬಾ ಹೋಬಳಿ, ಹಾಸನ ತಾಲ್ಲೂಕು (ಕಲ್ಲುಕೋಟೆ ಮಾಲೀಕರು)

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸೋಮಶೇಖರ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 24.11.2001 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 744 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು-01**

**ತಿದ್ದೋಲೆ ಅಧಿಸೂಚನೆ**

**ಸಂಖ್ಯೆ: ಕೃಮಾಇ:18:ನಿಯವಿ:2001, ದಿನಾಂಕ: 27ನೇ ಮೇ 2004**

ದೊಡ್ಡಬಳ್ಳಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ "ಮಾರುಕಟ್ಟೆ" ಮತ್ತು "ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿರುವ ಈ ಕಛೇರಿಯ ಸಮ ಸಂಖ್ಯೆಯ ದಿನಾಂಕ: 16.07.2003ರ ಕಂಡಿಕೆ 3 ರಲ್ಲಿರುವ "ದೊಡ್ಡಬಳ್ಳಾಪುರ ಕಸಬಾ ಹೋಬಳಿ, ರೋಜಿಪುರ

ಗ್ರಾಮದಲ್ಲಿನ ಪ್ರದೇಶವನ್ನು" ಎಂಬುದಕ್ಕೆ ಬದಲಾಗಿ, "ದೊಡ್ಡಬಳ್ಳಾಪುರ ನಗರಸಭೆ ಪರಿಮಿಯೊಳಗಿನ ಪ್ರದೇಶ ಹಾಗೂ ಕಸಬಾ ಹೋಬಳಿ ರೋಜಿಪುರ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು" ಎಂದು ಓದಿಕೊಳ್ಳತಕ್ಕದ್ದು ಎಂದು ತಿದ್ದುಪಡಿ ಮಾಡಲಾಗಿದೆ.

**ಸೈಯದ್ ಜಮೀರ್ ಪಾಷಾ**

ಪಿ.ಆರ್. 794 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-32:2003**

**ಅರ್ಜಿದಾರರು:** 1) ಶ್ರೀ ಈರೇಗೌಡ ಬಿನ್ ಅಣ್ಣೇಗೌಡ, 54 ವರ್ಷ 2) ಶ್ರೀಮತಿ ಕಾಳಮ್ಮ ಕೋಂ ಈರೇಗೌಡ, 45 ವರ್ಷ.
3) ಗಂಗಾಧರ ಬಿನ್ ಈರೇಗೌಡ, ಸುಮಾರು 23 ವರ್ಷ.
ವಾಸ: ಸಂಕನಹಳ್ಳಿ ಗ್ರಾಮ, ಕಸಬಾ ಹೋಬಳಿ, ಹೊಳೇನರಸೀಪುರ ತಾಲ್ಲೂಕು.

**ಪ್ರತಿವಾದಿಗಳು:** 1) ದಿಲ್‌ಶಾಬೇಗಂ ಕೋಂ ಭಾಷಾ ನಂ.45:1, ಎ.ಕ್ರಾಸ್, 5ನೇ ಮುಖ್ಯ ರಸ್ತೆ, ರೆಹಮತ್ ನಗರ, ಬೆಂಗಳೂರು.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸತೀಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 3.7.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 745 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

**OFFICE OF THE DEPUTY COMMISSIONER OF COMMERCIAL TAXES (ASSESSMENTS-15), CITY DIVISION-I, GANDHINAGAR, BANGALORE**

**KST No: 0090351-6, CST No: 0095351-9**

**Sub:** Loss of 'C' Forms - reg.

It is brought to the notice of all those concerned that this office has issued 'C' forms to M/s Cracker Bazaar, No.37, Main Channel Road, Ulsoor, Bangalore-8 bearing KST No.0090351-6 and CST No.0095351-9 and they have reported that they have lost 4 'C' forms, the details of which are as under:

| Sl.No. | 'C' Form No./Date | To whom 'C' Form were issued | Amount Involved |
|---|---|---|---|
| 1. | TCK 2128756 26.03.2003 | M/S. Ayyan Fireworks Factory Pvt. Ltd., Sivakasi. | Rs. 8,17,422-00 |
| 2. | TCK 2128757 26.03.2003 | M/S. Ayyan Fireworks Factory, Sivakasi. | Rs. 5,90,299-00 |
| 3. | TCK 2128758 26.03.2003 | M/S Sri Vigneshwara Fireworks Industries, Sivakasi. | Rs. 50,062-00 |
| 4. | TCK 2128759 26.03.2003 | M/S. The Aruna Paper Caps Industries, Sivakasi. | Rs. 21,804-00 |
| | | **Total:** | **Rs. 14,79,587-00** |

The above said 'C' forms issued for Rs.14,79,587-00, as the undersigned has declared that the said forms as obselete. If anybody finds the above forms may surrender the same to the Deputy Commr. of Comml. Taxes, (Assessments-15), Bangalore. The details are as follows:-

**FORMAT**

| | | |
|---|---|---|
| 1. | Assessing Authority | Deputy Commr. of Comml. Taxes, (Assessments-15), III Floor, Kheny Building, Gandhinagar, BANGALORE. |
| 2. | Description of Forms | 'C' Forms declaration |
| 3. | Machine Sly.No. of the 'C' Forms | TCK 2128756, 2128757, 2128758 and 2128759 |
| 4. | Dealer to whom the forms issued | M/S Ayyan Fireworks Factory Pvt. Ltd., Sivakasi<br>M/S. Sri Vigneshwara Fireworks Industries, Sivakasi.<br>M/S. The Aruna Paper Caps Industries, Sivakasi. |

| | | |
|---|---|---|
| 5. | KST and CST Number | 0090351-6/0095351-9 |
| 6. | Date of report of loss received in the Office of the Assessing Authority | 22.09.2003 |
| 7. | How lost/theft, destruction or in transit | Lost while in transit. |

**D. KUMARASWAMY**
Deputy Commissioner of Commercial Taxes
(Assessments-15) City Division-I, Bangalore-9.

P.R. 747

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಸುಧಾ ಹೆಚ್., ಶುಶ್ರೂಷಕಿ, ಸಾರ್ವಜನಿಕ ಆಸ್ಪತ್ರೆ, ಕಡೂರು ಇವರ ಗೈರುಹಾಜರಿ ಬಗ್ಗೆ - ಅಂತಿಮ ಆದೇಶ.

**ಓದಲಾಗಿದೆ:** 1) ಜಿಲ್ಲಾ ಆ.ಕು.ಕ. ಅಧಿಕಾರಿಗಳ ಕಾರಣ ಕೇಳಿ ನೋಟೀಸ್ ಸಂಖ್ಯೆ: ಆಕುಕ:ಸಿವಿ:3:ವಿವ:47:2003-04, ದಿನಾಂಕ: 28.6.2003.

2) ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು, ಚಿಕ್ಕಮಗಳೂರು ಇವರ ಪತ್ರ ಸಂಖ್ಯೆ: ಆಕುಕ:ಸಿವಿ(3)ವಿವ: 147:2002-03, ದಿನಾಂಕ: 4.8.2003.

**ಪ್ರಸ್ತಾವನೆ:**

ಶ್ರೀಮತಿ ಸುಧಾ ಹೆಚ್., ಶುಶ್ರೂಷಕಿ, ಸಾರ್ವಜನಿಕ ಆಸ್ಪತ್ರೆ, ಕಡೂರು ಇವರು ಶುಶ್ರೂಷಕರುಗಳ ಹಿಂಬಾಕಿ ಹುದ್ದೆಗಳಿಗೆ ನೇಮಕಾತಿ ಹೊಂದಿ ದಿನಾಂಕ: 24.8.2002 ರಂದು ಕರ್ತವ್ಯದ ಮೇಲೆ ಹಾಜರಾಗಿ ದಿನಾಂಕ: 1.9.2002 ರಿಂದ 4.9.2002 ರವರೆಗೆ ಅಸಾಧಾರಣ ರಜೆ ಅರ್ಜಿ ಸಲ್ಲಿಸಿ ನಂತರ ದಿನಾಂಕ: 5.9.2002 ರಿಂದ 7.9.2002 ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿ ದಿನಾಂಕ: 8.9.2002 ರಿಂದ 12.9.2002 ರವರೆಗೆ ಕಾರ್ಯ ನಿರ್ವಹಿಸಿ ಪುನಃ ದಿನಾಂಕ: 13.9.2002 ರಿಂದ ಅನಧಿಕೃತ ಗೈರುಹಾಜರಾಗಿರುತ್ತಾರೆ. ಕಾರಣ ಕೇಳಿ ನೋಟೀಸನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಚಿಕ್ಕಮಗಳೂರು ಇವರು ನೀಡಿದ್ದು, ವಿಳಾಸದಾರರು ವಾಸವಿಲ್ಲವೆಂದು ಲಕೋಟೆ ಹಿಂದಕ್ಕೆ ಬಂದಿರುತ್ತದೆ. 1957ರ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಮಾವಳಿ 11ರ ಅಡಿಯಲ್ಲಿ ದೋಷಾರೋಪಣೆ ಜಾರಿ ಮಾಡಿದ್ದು, ನೌಕರರು ಸ್ವೀಕರಿಸಿದ್ದು, ಲಿಖಿತ ಹೇಳಿಕೆ ನೀಡಿರುವುದಿಲ್ಲ ಹಾಗೂ ಕರ್ತವ್ಯದ ಮೇಲೆ ಹಾಜರಾಗಿರುವುದಿಲ್ಲ. ಆದುದರಿಂದ, ನೌಕರರನ್ನು ಸೇವೆಯಿಂದ ವಜಾಗೊಳಿಸಲು ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ನೌಕರರು ಖಾಯಂಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿ ಸರ್ಕಾರಿ ಸೇವಾ ನಿಯಮಗಳನ್ನು ಉಲ್ಲಂಘಿಸಿರುವುದರಿಂದ, ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ ಸರ್ಕಾರಿ ಸೇವೆಯಿಂದ ತೆಗೆದುಹಾಕಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಪಿಎನ್(9)ಸಿಆರ್:32:2003-04, ಬೆಂಗಳೂರು, ದಿನಾಂಕ: 12ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆದ ನಾನು ಶ್ರೀಮತಿ ಹೆಚ್. ಸುಧಾ, ಶುಶ್ರೂಷಕಿ, ಸಾರ್ವಜನಿಕ ಆಸ್ಪತ್ರೆ, ಕಡೂರು ಇವರು ಖಾಯಂಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ (ಪ್ರೊಬೇಷನರಿ) ನಿಯಮಗಳ 1997ರ ನಿಯಮ 6(1) ಮತ್ತು 6(2)ರ ಪ್ರಕಾರ ಇವರು ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ ಇವರನ್ನು ಗೈರುಹಾಜರಾಗಿರುವ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಿದ್ದೇನೆ. (ಡಿಸ್‌ಚಾರ್ಜ್)

**ಡಾ: ಜಿ.ಬಿ. ದೇಸಾಯಿ**
ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 748

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-7:2002**

**ಅರ್ಜಿದಾರರು**

1) ಶ್ರೀಮತಿ ಹೊನ್ನಮ್ಮ ಅಲಿಯಾಸ್ ಲಕ್ಷ್ಮಮ್ಮ ಕೋಂ ಲೇಟ್ ಹಾಲಪ್ಪ ಅಲಿಯಾಸ್ ಅಣ್ಣಪ್ಪ
2) ಕು: ರಾಧ ಬಿನ್ ಲೇಟ್ ಹಾಲಪ್ಪ, ಮೈನರ್.
3) ಕು: ಮೀನಾ ಬಿನ್ ಲೇಟ್ ಹಾಲಪ್ಪ, ಮೈನರ್.
ವಾಸ: ಹೊನ್ನೇನಹಳ್ಳಿ, ಸಕ್ಕರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

**ಪ್ರತಿವಾದಿಗಳು**

1) ದಿ ಮ್ಯಾನೇಜರ್, ಮೆ: ಮಟಸಾಗರ ಕಾಫಿ ಎಸ್ಟೇಟ್ಸ್, ಮಟಸಾಗರ, ಸಕಲೇಶಪುರ, ಹಾಸನ ಜಿಲ್ಲೆ.
2) ಮೆ: ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ವೆಂಕಟೇಶ್ವರ ಬಿಲ್ಡಿಂಗ್, ಬಿ.ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹಾಲಪ್ಪ ಅಲಿಯಾಸ್ ಅಣ್ಣಪ್ಪ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 09.02.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 749 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2,**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-60/2003, ದಿನಾಂಕ: 17ನೇ ಏಪ್ರಿಲ್ 2004**

**ಅರ್ಜಿದಾರರು**

1) ಶ್ರೀಮತಿ ಭಾಗ್ಯ ಕೋಂ ಲೇಟ್ ಬಾಬು
2) ಬಿ. ಶ್ರೀರಂಗನಾಥ ಬಿನ್ ಲೇಟ್ ಬಾಬು
3) ಬಿ. ಶ್ರೀನಿವಾಸ ಬಿನ್ ಲೇಟ್ ಬಾಬು
ನಂ.230, 2ನೇ ಮೇನ್, 2ನೇ ಕ್ರಾಸ್, ವಿಜಯಾನಂದ ನಗರ, ನಂದಿನಿ ಲೇಔಟ್, ಬೆಂಗಳೂರು.

**ಪ್ರತಿವಾದಿಗಳು**

1) ಆರ್. ಜೈಶಂಕರ ಬಿನ್ ಲೇಟ್ ರಾಮಪ್ಪ, ನಂ:16, ರಾಮಪ್ಪ ನಿಲಯ, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು.
2) ಶಾಖಾ ವ್ಯವಸ್ಥಾಪಕರು, ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ಡಿವಿಜನ್ ಕಛೇರಿ-3, ನಂ:15-17-18, ಕಾಂಪ್ಲೆಕ್ಸ್, ಸೇಂಟ್ ಮಾರ್ಕ್ಸ್ ರಸ್ತೆ, ಬೆಂಗಳೂರು-1.

**ಪ್ರಕಟಣೆ**

ಅರ್ಜಿದಾರರಾದ 1) ಭಾಗ್ಯ, 2) ಬಿ. ಶ್ರೀರಂಗನಾಥ, 3) ಬಿ. ಶ್ರೀನಿವಾಸ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಬಾಬು ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 750 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**

**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-5/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**

1) ಗೌರಮ್ಮ ಕೋಂ ಲೇಟ್ ತಿಮ್ಮಯ್ಯ, 29 ವರ್ಷ
2) ಶೃತಿ ಬಿನ್ ಲೇಟ್ ತಿಮ್ಮಯ್ಯ, 11 ವರ್ಷ
3) ಕವಿತ ಬಿನ್ ಲೇಟ್ ತಿಮ್ಮಯ್ಯ, 9 ವರ್ಷ
4) ಪವಿತ್ರ ಬಿನ್ ಲೇಟ್ ತಿಮ್ಮಯ್ಯ, 7 ವರ್ಷ
5) ಕಾಳಯ್ಯ ಬಿನ್ ದುರ್ಗಯ್ಯ, 65 ವರ್ಷ
6) ಗುವಮ್ಮ ಕೋಂ ಕಾಳಯ್ಯ, 60 ವರ್ಷ
ವಾಸ: ಬ್ಯಾಟರಾಯನದೊಡ್ಡಿ, ಬಿ.ಜಿ. ಪುರ ಪೋಸ್ಟ್, ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು.

**ಪ್ರತಿವಾದಿಗಳು**

1) ಸುಲೋಚನ ಕೆ. ರಾವ್ ಕೋಂ ಕೃಷ್ಣೋಜಿ ರಾವ್, ಮೆ: ಎಸ್.ಕೆ. ಇಂಡಸ್ಟ್ರೀಸ್, ನಂ.24, 'ಂ' ಬ್ಲಾಕ್, ಸಿಎಆರ್ ಸೌತ್, ಆಡುಗೋಡಿ, ಬೆಂಗಳೂರು-30.
2) ದಿ ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂಪನಿ ಲಿಮಿಟೆಡ್, ನಂ.2, 1ನೇ ಮಹಡಿ, ಹೊಸೂರು ಮುಖ್ಯರಸ್ತೆ, ಮಡಿವಾಳ, ಬೆಂಗಳೂರು-68.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 28.1.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ತಿಮ್ಮಯ್ಯ, ವಯಸ್ಸು ಸುಮಾರು 30 ವರ್ಷ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 752 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-9/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**

1) ಶ್ರೀಮತಿ ಆರ್. ಲಲಿತ ಕೋಂ ಲೇಟ್ ನಾಗರಾಜ ಕೆ.ಆರ್., 26 ವರ್ಷ ವಯಸ್ಸು.
2) ಮಾ: ಎನ್. ನಿತೀನ್ ಬಿನ್ ಲೇಟ್ ನಾಗರಾಜ ಕೆ.ಆರ್., 6 ವರ್ಷ ವಯಸ್ಸು
3) ಮಾ: ಎನ್. ನವೀನ್ ಬಿನ್ ಲೇಟ್ ನಾಗರಾಜ ಕೆ.ಆರ್., 1 1/2 ವರ್ಷ ವಯಸ್ಸು
4) ರಾಮಯ್ಯ ಬಿನ್ ಲೇಟ್ ಈರಣ್ಣ, 65 ವರ್ಷ ಕಿಟ್ಟಿಗನಹಳ್ಳಿ, ಆನೇಕಲ್ ತಾಲ್ಲೂಕು.

**ಪ್ರತಿವಾದಿಗಳು**

1) ಚೋಳ ಮಂಡಲಂ ಜನರಲ್ ಇನ್ಸುರೆನ್ಸ್ ಕಂ. ಲಿ., 9/1, ಅಲಸೂರು ರಸ್ತೆ, ಬೆಂಗಳೂರು.
2) ಎಂ. ಲೋಕೇಶ್ ಬಿನ್ ಮುನಿಕೃಷ್ಣಪ್ಪ ಹೆನ್ನಾಗಲ ವಿಲೇಜ್, ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 24.3.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಕೆ.ಆರ್. ನಾಗರಾಜು, ವಯಸ್ಸು ಸುಮಾರು 32 ವರ್ಷ ಅವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 753 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-1/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**

ಶ್ರೀಮತಿ ತಸ್ಲಿಂ ಬೇಗಂ ಕೋಂ ಲೇಟ್ ಅನ್ಸರ್ ಪಾಷ, ವಯಸ್ಸು ಸುಮಾರು 40 ವರ್ಷ, ನಂ35, ಸಭಾ ಮಂದಿರ, ಪಿಲ್ಲಣ್ಣ ಗಾರ್ಡನ್, 3ನೇ ಹಂತ, ಬೆಂಗಳೂರು-45.

**ಪ್ರತಿವಾದಿಗಳು**

ಎಕ್ಸಿಕ್ಯೂಟೀವ್ ಇಂಜಿನಿಯರ್ (ಎಲೆಕ್ಟ್ರಿಕ್), ಅಡಿಷನಲ್ ರೂರಲ್ ಸೌತ್ ಡಿವಿಜನ್, ಚಂದಾಪುರ, ಬೆಂಗಳೂರು-81.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರ ಪತಿ ಅನ್ಸರ್ ಪಾಷಾ ಇವರು ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾಗ, ದಿನಾಂಕ: 16.6.2003 ರಂದು ಮರಣ ಹೊಂದಿರುವುದಾಗಿ ಹೇಳಿ, ಪ್ರತಿವಾದಿ ಸಂಸ್ಥೆಯವರು ಈ ನ್ಯಾಯಾಲಯದಲ್ಲಿ ರೂ. 2,99,340/- ಪರಿಹಾರವನ್ನು ಠೇವಣಿ ಇಟ್ಟಿರುತ್ತಾರೆ. ಈ ಬಗ್ಗೆ ಮೃತನ ಪತ್ನಿ ಶ್ರೀಮತಿ ತಸ್ಲಿಂ ಬೇಗಂ ಇವರು ಈ ನ್ಯಾಯಾಲಯಕ್ಕೆ ದಿನಾಂಕ: 18.5.2004 ರಂದು ಸಲ್ಲಿಸಿದ ಅರ್ಜಿಯಲ್ಲಿ ತನಗೆ 3 ಜನ ಹೆಣ್ಣುಮಕ್ಕಳೆಂದು ಹೇಳಿರುತ್ತಾರೆ. ಅವರುಗಳೆಂದರೆ ಕು: ತಾರಾನಾಂ ಸುಲ್ತಾನ, 14 ವರ್ಷ, ನಿಕಿತ ಅಸಂ, 10 ವರ್ಷ, ಹೀನಾ ಕ್ಯಾಸರ್, 7 ವರ್ಷ. ಆದರೆ ಶ್ರೀಮತಿ ತಸ್ಲಿಂ ಬೇಗಂ ಅವರ ಅರ್ಜಿಯಲ್ಲಿ ಪತಿ ಅನ್ಸರ್ ಪಾಷಾ ಅವರ ತಂದೆತಾಯಿಯ ಬಗ್ಗೆ ಹಾಗೂ ಸಹೋದರ, ಸಹೋದರಿಯರ ಬಗ್ಗೆ ಯಾವುದೇ ಉಲ್ಲೇಖವಿರುವುದಿಲ್ಲ. ಹೀಗಿರುವುದರಿಂದ ಕಾರ್ಮಿಕ

ಪರಿಹಾರ ಕಾಯ್ದೆ, 1923 ರನ್ವಯ ಮೃತನ "ಅವಲಂಬಿತರು" ಪರಿಹಾರವನ್ನು ಪಡೆಯಲು ಅರ್ಹರಾಗಿರುವುದರಿಂದ (1) ತಸ್ಲಿಂ ಬೇಗಂ (2) ಕು: ತಾರಾನಾಂ ಸುಲ್ತಾನ, 14 ವರ್ಷ (3) ನಿಕಿತ ಅಸಂ, 10 ವರ್ಷ, (4) ಹೀನಾ ಕ್ಯಾಸರ್, 7 ವರ್ಷ, ಇವರುಗಳನ್ನು ಹೊರತುಪಡಿಸಿ ಬೇರೆ ಯಾರಾದರೂ ಮೃತ ಅನ್ವರ್ ಪಾಷಾ ಅವರ "ಅವಲಂಬಿತರು" ಇದ್ದ ಪಕ್ಷದಲ್ಲಿ ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 15 ದಿವಸಗಳೊಳಗಾಗಿ ಈ ನ್ಯಾಯಾಲಯದಲ್ಲಿ ಹಾಜರಾಗಿ ಲಿಖಿತ ಆಕ್ಷೇಪಣೆ ಸಲ್ಲಿಸತಕ್ಕದ್ದು. ಒಂದು ಪಕ್ಷ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 754 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-3/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**

1) ಶ್ರೀ ಚಿಕ್ಕತಿಮ್ಮಯ್ಯ ಬಿನ್ ದೊಡ್ಡ ಕೊಂಡಪ್ಪ, 60 ವರ್ಷ
2) ಶ್ರೀಮತಿ ಮುದ್ದಕ್ಕ ಕೋಂ ಚಿಕ್ಕ ತಿಮ್ಮಯ್ಯ, 55 ವರ್ಷ
ವಾಸ: ಸಂಕರಪುರ, ಪುರವರ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರತಿವಾದಿಗಳು**

ಶ್ರೀ ಕೆ. ಮೀರ್ ಅಕ್ರಂ ಬಿನ್ ಕೆ. ಮೀರ್‌ಖಾನ್, ಮಾಲೀಕರು, ಮೆ: ಡೆಕ್ಕನ್ ಮೋಟಾರ್ ಸರ್ವೀಸ್, ನಂ.50, ಕಾಜು ಸ್ಟ್ರೀಟ್, ಬಸವನಗುಡಿ, ಬೆಂಗಳೂರು-560004.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 14.1.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಗೋವಿಂದ, ವಯಸ್ಸು ಸುಮಾರು 21 ವರ್ಷ ಅವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 755 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-4/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**

1) ಪಾರ್ವತಿ ಕೋಂ ಲೇಟ್ ಧನಲಿಂಗೇಗೌಡ, 30 ವರ್ಷ
2) ಉಷಾರಾಣಿ ಬಿನ್ ಲೇಟ್ ಧನಲಿಂಗೇಗೌಡ, 6 ವರ್ಷ
3) ಯಶೋಧರ ಬಿನ್ ಲೇಟ್ ಧನಲಿಂಗೇಗೌಡ, 8 ವರ್ಷ
ವಾಸ: 379, 12ನೇ ಮೈನ್, 6ನೇ ಕ್ರಾಸ್, ರಾಘವೇಂದ್ರ ಬ್ಲಾಕ್, ಶ್ರೀನಗರ, ಬೆಂಗಳೂರು-50
4) ಮಾಯಮ್ಮ (ತಾಯಿ), 70 ವರ್ಷ, ಚಮಲಪುರ, ಮಂಡ್ಯ ಜಿಲ್ಲೆ.

**ಪ್ರತಿವಾದಿಗಳು**

1) ಶ್ರೀಮತಿ ಅಖಿಲಾ ಸುರೇಂದ್ರನ್, ಮೆ: ಟೂರಿಸ್ಟ್ ಈಸ್ಟ್ ವೆಸ್ಟ್, ಮಾಲೀಕರು, 35, 11ನೇ ಮುಖ್ಯರಸ್ತೆ, ವಸಂತನಗರ, ಬೆಂಗಳೂರು-52.
2) ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ. ಲಿ., ನಂ.21, ಸೆಂಟ್ ಪ್ಯಾಟ್ರಿಕ್ಸ್ ಬಿಲ್ಡಿಂಗ್, ಮ್ಯೂಸಿಯಂ ರಸ್ತೆ, ಬೆಂಗಳೂರು-25.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 20.1.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಧನಲಿಂಗೇಗೌಡ, ವಯಸ್ಸು ಸುಮಾರು 40 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 756 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ-ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29.**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-7/2004, ದಿನಾಂಕ: 21ನೇ ಮೇ 2004**

**ಅರ್ಜಿದಾರರು**
1) ಶ್ರೀ ಶಿವನಂಜಪ್ಪ ಬಿನ್ ಲೇಟ್ ಬಸಪ್ಪ, 48 ವರ್ಷ
2) ಶ್ರೀಮತಿ ಜಯಮ್ಮ ಕೋಂ ಶಿವನಂಜಪ್ಪ, 44 ವರ್ಷ
ಕು: ಕಾಂತಮಣಿ ಬಿನ್ ಶಿವನಂಜಪ್ಪ, 18 ವರ್ಷ
ವಾಸ: ಲಿಂಗದಹಳ್ಳಿ ವಿಲೇಜ್, ದೊಡ್ಡ ಬೆಮ್ಮತ್ತಿ ಪೋಸ್ಟ್, ಮಲ್ಲಿಪಟ್ನ ಹೋಬಳಿ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ.

**ಪ್ರತಿವಾದಿಗಳು**
1) ಕೆ.ಆರ್. ರಮೇಶ್, ಲವಕುಶನಗರ್, ಹೊಸೂರು ಮುಖ್ಯರಸ್ತೆ, ಬೆಂಗಳೂರು-68.
2) ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ. ಲಿ., ನಂ.2, 1ನೇ ಮಹಡಿ, ಹೊಸೂರು ಮುಖ್ಯ ರಸ್ತೆ, ಮಡಿವಾಳ, ಬೆಂಗಳೂರು-68.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 16.2.2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಎಲ್.ಎಸ್. ನಂದೀಶ್ ಉ: ಸುರೇಶ್, ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 757 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-6, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ**

**ಸಂಖ್ಯೆ: ಎಸ್‌ಎಫ್ ಹಳಿಯಾಳ/ಎಫ್‌ಆಯ್‌ಆರ್-7/2002-03, ಹಳಿಯಾಳ, ದಿನಾಂಕ: 28ನೇ ಫೆಬ್ರವರಿ 2004**

**ನಿರೂಪಣಾಧಿಕಾರಿಗಳು:** ಶ್ರೀ ರಾಮಚಂದ್ರ, ಭಾ.ಅ.ಸೇ,
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ.

**ಫಿರ್ಯಾದಿ:** ಶ್ರೀ ಬಿ.ಆರ್. ಚಿಕ್ಕಮಠ, ಶಾಖಾ ವನಪಾಲಕ, ಹಳಿಯಾಳ

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಶ್ರೀ ಉಳವೆಪ್ಪಾ ಕುಂಬಾರ, ಸಾ: ಉಣಕಲ್, ಹುಬ್ಬಳ್ಳಿ. ಆರ್.ಸಿ ಓನರ ಟೆಂಪೊ, ಟ್ರಕ್ ನಂ. ಕೆಎ-25/7184

**ಪ್ರಕರಣದ ಸಾರಾಂಶ:-**

ದಿನಾಂಕ: 20.7.2002 ರಂದು ಭಾಗ ವನಪಾಲಕ, ಹಳಿಯಾಳ ಮತ್ತು ಸಿಬ್ಬಂದಿ ಜನರು ಕಾಳ ಬೈರವ ಯೋಜನೆಯಡಿಯಲ್ಲಿ ರಾತ್ರಿ ಗಸ್ತು ತಿರುಗುತ್ತಿರುವಾಗ ಹಳಿಯಾಳದಿಂದ ಧಾರವಾಡಕ್ಕೆ ಹೋಗುವ ಪಿಡಬ್ಲ್ಯೂಡಿ ರಸ್ತೆಯ ಪಕ್ಕದ ತತ್ವಣಗಿ ಎಫ್‌ಎಸ್ ನಂ.77ಎ ನೇದರ ಹತ್ತಿರ ಗೂಡ್ಸ್ ಟೆಂಪೊ ಕೆಎ-25/7184 ಟಾಟಾ-407 ನೇದರಲ್ಲಿ ಅನಧಿಕೃತವಾಗಿ ಸಾಗವಾನಿ ಬಿಲೆಟ್ಸ್ 48=0.928 ಘ.ಮೀ. ಹಾಗೂ ಜಲಾವ ಕಟ್ಟಿಗೆ 3.000 ಘ.ಮೀ. ಹೇರಿಕೊಂಡು ಕಳ್ಳ ಸಾಗಾಟ ಮಾಡುತ್ತಿರುವಾಗ ಪತ್ತೆ ಹಚ್ಚಿ ಭಾಗ ವನಪಾಲಕ, ಹಳಿಯಾಳ ರವರ ಪ್ರಥಮ ವರದಿ ಸಂಖ್ಯೆ: 7/02-03 ದಿನಾಂಕ: 20.7.2002 ನೇದರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ನೇ ಸೆಕ್ಷನ್ 24(ಇ) 50(2ಬಿ), 62, 71ಎ ರಿಂದ ಜಿ ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969 ಕಲಂ 144, 145, 165 ನೇದರಂತೆ ಮಾಲು ಸಮೇತ ವಾಹನ ಜಪ್ತಿ ಮಾಡಿ ಮುಂದಿನ ತನಿಖೆಗೆ ಅರಣ್ಯ ಇಲಾಖೆ ವಶಕ್ಕೆ ತೆಗೆದುಕೊಂಡು ವಲಯ ಅರಣ್ಯಾಧಿಕಾರಿ, ಹಳಿಯಾಳರವರ ವರದಿ ಸಂಖ್ಯೆ: 545/02-03, ದಿನಾಂಕ: 20.7.2002 ರಂದು ಈ ಪ್ರಾಧಿಕಾರದ ಮುಂದೆ ಕರ್ನಾಟಕ ಅರಣ್ಯ ಕಾಯ್ದೆ 71ಎ ದಿಂದ ಜಿ ನೇದರ ಮೇರೆಗೆ ಈ ಪ್ರಾಧಿಕಾರದ ಮುಂದೆ ದಿ: 21.7.2002 ರಂದು ಹಾಜರು ಪಡಿಸಿರುವುದನ್ನು ವಾಹನ ಭದ್ರತೆಯ ಬಗ್ಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ:

ಗುನ್ನೆ/ಎಫ್‌ಆಯ್‌ಆರ್/ಜಿಎಫ್/ಹಳಿಯಾಳ/7/2002-03, ದಿನಾಂಕ: 21.7.2002 ರಂತೆ ಜಪ್ತಿ ವಾಹನ ಸಂಖ್ಯೆ: ಕೆಎ-25/7184 ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಹಳಿಯಾಳ ರವರ ವಶಕ್ಕೆ ನೀಡಿದೆ. ಗುನ್ನೆ ಪತ್ತೆ ಹಚ್ಚಿದ ವೇಳೆಯಲ್ಲಿ ಕೈಗೆ ಸಿಕ್ಕಿದ ಅಪರಾಧಿಗಳನ್ನು ಅರಣ್ಯ ಸಿಬ್ಬಂದಿ ಜನರು ಮಾನ್ಯ ಜೆಎಂಎಫ್‌ಸಿ, ಹಳಿಯಾಳ ಇವರ ಮುಂದೆ ಹಾಜರ್ ಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡ ಇವರಿಂದ ಲಾರಿ ಮಾಲಿಕತ್ವ ಯಾರಿಗೆ ಸೇರಿದ್ದೆಂದು ಪ್ರಮಾಣ ಪತ್ರ ಪಡೆಯಲಾಗಿದ್ದು ಪ್ರಮಾಣ ಪತ್ರದಲ್ಲಿ ತಿಳಿಸಿರುವಂತೆ ಮಾಲಿಕತ್ವ ಹೊಂದಿರುವ ವ್ಯಕ್ತಿಗೆ ನೋಟಿಸು ನೀಡಲಾಗಿದ್ದು ಅದರಂತೆ ಅರ್ಜಿದಾರರು ಈ ಪ್ರಕರಣದಲ್ಲಿ ವಾಹನ ಬಿಡುಗಡೆ ಕೋರಿ ಅರ್ಜಿಸಲ್ಲಿಸಿದ್ದು ಅರ್ಜಿದಾರರು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಗೆ ಸಹಾಯಕ ಸರಕಾರಿ ವಕೀಲರು, ಹಳಿಯಾಳ ಇವರು ತಕರಾರು ಸಲ್ಲಿಸಿರುವರು ಸದರ ಜಪ್ತಿ ವಾಹನವನ್ನು ಸರಕಾರಿ ಸೊತ್ತನ್ನು ಕಳ್ಳತನದಿಂದ ಅಪಹರಿಸಲು ಬಳಸಿರುವುದು. ಶಾಖಾ ವನಪಾಲಕ, ಹಳಿಯಾಳ ಇವರ ಪ್ರಥಮ ವರದಿ ಸಂಖ್ಯೆ: 7/02-03 ನೇದರಲ್ಲಿ ನಮೂದಿಸಿದ್ದು ಕಾದಿಟ್ಟ ಅರಣ್ಯ ಪ್ರದೇಶದಿಂದ ಕಳ್ಳತನ ಮಾಡಿರುವುದರಿಂದ ಹಾಗೂ ವಾಹನದ ಮಾಲಿಕರಿಗೆ ತಿಳಿಯದೇ ಈ ಕೃತ್ಯ ನಡೆದಿದೆ ಎನ್ನುವ ಬಗ್ಗೆ ಸರಿಯಾದ ಸಾಕ್ಷಿಗಳು ಇಲ್ಲದೇ ಇರುವುದರಿಂದ ವಾಹನ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಲು ಯೋಗ್ಯವಾಗಿದೆ ಎಂದು ಲಿಖಿತ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಆದ್ದರಿಂದ ಸದರ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ಇಟ್ಟುಕೊಂಡು ವಾದಿ ಮತ್ತು ಪ್ರತಿವಾದಿಗಳಿಗೆ ಹಾಜರಿರಲು ತಿಳಿಸಲಾಯಿತು. ವಿಚಾರಣೆ ಕಾಲದಲ್ಲಿ ಪ್ರತಿವಾದಿಗಳು ಜಪ್ತಿ ಅರಣ್ಯ ಉತ್ಪತ್ತಿ ತಮ್ಮದೆನ್ನುವ ಬಗ್ಗೆ ಯಾವುದೇ ಅಧೀಕೃತ ದಾಖಲೆಗಳನ್ನು ನ್ಯಾಯಾಲಯದ ಮುಂದೆ ವಿಚಾರಣೆ ಕಾಲದಲ್ಲಿ ಹಾಜರ್‌ಪಡಿಸಿರುವುದಿಲ್ಲ. ಇದರಿಂದ ವಾದಿ ಮತ್ತು ಪ್ರತಿವಾದಿಗಳ ವಾದಗಳನ್ನು ಕೂಲಂಕುಷವಾಗಿ ಆಲಿಸಿ ವಾಹನವನ್ನು ಮಧ್ಯಂತರ ವಶಕ್ಕೆ ಮಾಲೀಕರಿಗೆ ನೀಡಿದಲ್ಲಿ ಪುನಃ ಅಕ್ರಮ ಸಾಗಾಣಿಕೆಯಲ್ಲಿ ಬಳಸುವ ಸಾಧ್ಯತೆಗಳಿರುವುದರಿಂದ ಮನವರಿಕೆ ಮಾಡಿಕೊಂಡು ವಾಹನ ಸಂಖ್ಯೆ: ಕೆಎ-25/7184ರ ಮಧ್ಯಂತರ ವಶ ಅರ್ಜಿಯನ್ನು ಅಂತಿಮ ಆದೇಶವಾಗುವವರೆಗೆ ತಿರಸ್ಕರಿಸಿ ದಿನಾಂಕ: 13.2.2003 ರಂದು ಆದೇಶ ಹೊರಡಿಸಿದೆ.

ಈ ಕುರಿತು ಮೇಲೆ ತಿಳಿಸಿದ ಎಲ್ಲಾ ಸಂಗತಿಗಳ ವಿವರವಾದ ಅಂಶಗಳನ್ನು ಪರಿಶೀಲಿಸಲಾಗಿ ಈ ಪ್ರಕರಣದಲ್ಲಿ ವಾಹನ ಹಾಗೂ ಜಪ್ತಿ ಮಾಡಿದ ಅರಣ್ಯೋತ್ಪತ್ತಿಯ ವಿಲೆಯ ಸಲುವಾಗಿ ಪೂರ್ಣ ಪ್ರಮಾಣದ ವಿಚಾರಣೆಯನ್ನು ಕೈಗೊಳ್ಳುವ ಮೂಲಕ ವಾಸ್ತವ ರೀತಿಯಲ್ಲಿ ಕಾನೂನಿನ ಅಂಶಗಳನ್ನು ಹೊಂದಿಕೊಂಡಂತೆ ಆದೇಶ ನೀಡುವುದು ಸಮಂಜಸವೆಂದು ಭಾವಿಸಿ ಈ ಸಂಬಂಧ ವಿಚಾರಣೆಯನ್ನು ಕೈಗೊಳ್ಳಲಾಗಿರುತ್ತದೆ.

ಈ ಪ್ರಕರಣದಲ್ಲಿ ಅಭಿಯೋಗದ ಪರ ಐದು ಜನ ಸಾಕ್ಷಿಗಳನ್ನು ನುಡಿಸಿಕೊಂಡಿದ್ದು ಈ ಸಾಕ್ಷಿಗಳ ಮೂಲ ನಿಶಾನೆ ಪಿ-1 ರಿಂದ ನಿಶಾನೆ-ಪಿ 14(ಎ) ವರೆಗೆ ದಾಖಲಾತಿಗಳನ್ನು ನಿಶಾನಿಸಲ್ಪಟ್ಟಿವೆ. ಮತ್ತು ಮುದ್ದೆಮಾಲು 1 ರಿಂದ 3ಕ್ಕೆ ಗುರುತಿಸಲ್ಪಟ್ಟಿವೆ. ಈ ಪ್ರಕರಣದ ಚಾ.ಸಾ.3, ಚಾ.ಸಾ.5, ಚಾ.ಸಾ.7 ರಿಂದ 9 ನೇದವರ ವಿಚಾರಣೆಯನ್ನು ಪಿಡಬ್ಲ್ಯೂ 1 ರಿಂದ 5 ರವರೆಗೆ ಸಾಕ್ಷ ನುಡಿಸಿದ್ದರಿಂದ ಸದರಿಯವರ ವಿಚಾರಣೆಯನ್ನು ಅಭಿಯೋಜನೆಯು ಕೈಬಿಟ್ಟಿರುತ್ತದೆ. ಅರ್ಜಿದಾರರ ಪರ ವಿಚಾರಣೆ ಮಾಡಲ್ಪಟ್ಟು ಡಿಡಬ್ಲ್ಯೂ 1 ರಿಂದ ಪಿಡಬ್ಲ್ಯೂ 3 ರವರೆಗೆ ಗುರುತಿಸಲಾಗಿದ್ದು ಉಭಯ ಕಡೆ ಸಾಕ್ಷಿಗಳ ವಿಚಾರಣೆಯಿಂದ ಮತ್ತು ನಿಶಾನಿಸಲ್ಪಟ್ಟ ದಾಖಲೆಗಳು ಮತ್ತೆ ಗುರುತಿಸಲ್ಪಟ್ಟವು. ಮುದ್ದೆಮಾಲುಗಳು ಇವುಗಳ ಕೂಲಂಕುಷ ಪರಿಶೀಲನೆಯಿಂದ ಹಾಗೂ ಉಭಯ ಕಡೆಯ ವಕೀಲರ ವಾದ ಮಂಡನೆಯಿಂದ ಈ ಪ್ರಕರಣದಲ್ಲಿ ಈ ಕೆಳಕಂಡಂತೆ ಪರಿಶೀಲನಾ ಅಂಶವನ್ನು ಪ್ರಕರಣದ ಪರಿಣಾಮಕಾರಿ ಹಾಗೂ ಸ್ಪಷ್ಟ ಆದೇಶಕ್ಕಾಗಿ ಮಾಡಲಾಗಿದ್ದು ಅವುಗಳು ಈ ಕೆಳಗಿನಂತಿರುತ್ತದೆ.

ವಿಚಾರಣೆ ಮಾಡಲ್ಪಟ್ಟ ಪಿಡಬ್ಲ್ಯೂ-1 ಇವರು ತಮ್ಮ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 19.7.2002 ರಂದು ನಾನು ಮತ್ತೆ ನಮ್ಮ ಸಿಬ್ಬಂದಿಯವರು ಕೂಡಿ ರಾತ್ರಿ 11.00 ಘಂಟೆಗೆ ಕಾಳಬೈರವ ಕಾರ್ಯಾಚರಣೆಯ ಅಡಿಯಲ್ಲಿ ನಮ್ಮ ಇಲಾಖೆಯ ಡಿಸಿಎಂ ವಾಹನದಲ್ಲಿ ಹಳಿಯಾಳದಿಂದ ಹೊರಟೆವು. ಆ ಕಾಲಕ್ಕೆ ನಾವು ಹಳಿಯಾಳ ಪಟ್ಟಣದ ಕೆಸರೊಳ್ಳಿ ಮತ್ತು ಬಾಮಣಿಕೊಪ್ಪ ಕಡೆಗೆ ಪೇಟ್ರೊಲಿಂಗ ಮಾಡಿಕೊಂಡು ನಂತರ ಹಳಿಯಾಳದಿಂದ ಧಾರವಾಡ ರಸ್ತೆಗೆ ಹೊರಟೆವು ಸುಮಾರು 5.00 ಕಿ.ಮೀ. ಹೋದ ನಂತರ ಒಂದು ಟೆಂಪೊ ನಿಂತಿದ್ದು ನೋಡಿದೆವು. ಟೆಂಪೊದ ಹತ್ತಿರ ಹೋಗಿ ನೋಡಲಾಗಿ ಟೆಂಪೊದ ಡ್ರೈವರನು ಏನು ರೀಪೇರಿ ಮಾಡುತ್ತಿದ್ದನು. ಸದರ ಟೆಂಪೊದಲ್ಲಿ ಏನಿದೆ ಎಂದು ವಿಚಾರಿಸಲಾಗಿ ತಡವರಿಸುತ್ತಾ ಕಟ್ಟಿಗೆ ಇದೆ ಅಂತಾ ಹೇಳಿದನು. ಈ ಕುರಿತು ಪಾಸ ವ ಪರ್ಮಿಟ್ ಇದೆಯೇ ಅಂತ ಕೇಳಲಾಗಿ ಡ್ರೈವರನು ಟೆಂಪೊದ ಹಿಂದೆ ಎಂ.ಎಚ್. ಅಂಗಡಿ ಅನ್ನುವವರು ಇದ್ದಾರೆ. ಅವರ ಹತ್ತಿರ ಕಟ್ಟಿಗೆ ಪಾಸ ಇದೆ ಅಂತಾ ತಿಳಿಸಿದನು. ನಂತರ ಟೆಂಪೊದ ಹಿಂದೆ ಹೋಗುವಷ್ಟರಲ್ಲಿ ಇಳಿದು ಓಡಿ ಹೋದನು. ಓಡಿ ಹೋದವನನ್ನು ನಾವು ಹಿಡಿಯಲು ಪ್ರಯತ್ನಿಸಿದರೂ ಸಿಗಲಿಲ್ಲ. ನಂತರ ಟೆಂಪೊದ ಹಿಂದೆ ಬ್ಯಾಟರಿ ಬೆಳಕಿನ ಸಹಾಯದಿಂದ ನೋಡಲಾಗಿ ಇಬ್ಬರು ವ್ಯಕ್ತಿ ಕುಳಿತಿದ್ದರು. ಈ ಸೌದೆಯ ಮೇಲ್ಪಟ್ಟ ವಿಚಾರಣೆಯಲ್ಲಿ 3 ಜನ ಆಸಾಮಿಗಳ ಸಹಾಯದಿಂದ ಟೆಂಪೊವನ್ನು ಪರಿಶೀಲಿಸಿದಾಗ ಅದರಲ್ಲಿ ಸಣ್ಣ ಸಣ್ಣ ಗಾತ್ರದ ಸಾಗವಾನಿ ಕಟ್ಟಿಗೆ ತುಂಬಿದ್ದು ಕಂಡು ಬಂದಿತು. ಸದರ ಸಾಗವಾನಿ ನಾಟಾಗಳ ಮೇಲೆ ಸರ್ಕಾರದ ಛಪ್ಪಾ ಅಥವಾ ಗುರುತು ಬಗ್ಗೆ ಪರಿಶೀಲಿಸಿ ನೋಡಿದೆವು. ಅವುಗಳ ಮೇಲೆ ಇಲಾಖಾ ಗುರುತು ಇರಲಿಲ್ಲಾ ನಂತರ ವಾಹನದಲ್ಲಿ ತುಂಬಿದ ಕಟ್ಟಿಗೆ ಎಲ್ಲಿಂದ ತಂದಿರುವಿರಿ ಎಂದು ಆರೋಪಿತರನ್ನು ಕೇಳಿದಾಗ ಮೂರು ಜನರು ಈಗ 2 ದಿನಗಳ ಹಿಂದೇ ಗೋಲೆಹಳ್ಳಿ ಅರಣ್ಯ ಪ್ರದೇಶದಲ್ಲಿ ಸಾಗವಾನಿ ಗಿಡಗಳನ್ನು ಕಡಿದು ದಾಸ್ತಾನು ಇಟ್ಟು ಈ ದಿನ ಅದನ್ನು ಹೇರಿಕೊಂಡು ಹುಬ್ಬಳ್ಳಿಗೆ ಸಾಗಿಸುತ್ತಿರುವುದಾಗಿ ತಿಳಿಸಿದರು. ಸದರ ಕಟ್ಟಿಗೆಯನ್ನು ಅಳತೆ ಮಾಡಿ ನೋಡಲಾಗಿ ಸಾಗವಾನಿ ಜಲಾವ ಕಟ್ಟಿಗೆ 3.00 ಘ.ಮೀ. ಆಯಿತು. ಸಾಗವಾನಿ ತುಂಡುಗಳ ಎಣಿಸಿ ನೋಡಲಾಗಿ ಅವುಗಳ 48 ತುಂಡುಗಳು ಇದ್ದವು ಸದ್ರಿ ತುಂಡುಗಳಿಗೆ 1 ರಿಂದ 48 ಅಂತಾ ಕೆಂಪು ಬಣ್ಣದಿಂದ ಅನುಕ್ರಮ ನಂಬರುಗಳನ್ನು ಹಾಕಿದೆವು. ನಂತರ ಪಂಚರನ್ನು ಹುಡುಕಾಡಿದೆವು. ರಾತ್ರಿಯಾಗಿದ್ದರಿಂದ ನಮ್ಮ ಇಲಾಖೆ ಸಿಬ್ಬಂದಿಯವರಿಗೆ ಪಂಚರಾಗಿರಿಸಿಕೊಂಡು ಪಂಚನಾಮೆಯನ್ನು ದಿನಾಂಕ: 20.7.2002 ರಂದು ರಾತ್ರಿ 10.30 ರಿಂದ 1.30 ರವರೆಗೆ ಮಾಡಿದೆವು. ನಂತರ ನಾನು ಎಫ್‌ಐಆರ್ ದಾಖಲಿಸಿಕೊಂಡಿದ್ದು ಜಪ್ತಿಪಡಿಸಿದ ವಾಹನ ಮುದ್ದೆಮಾಲು ಹಾಗೂ ಆರೋಪಿತರನ್ನು ದಸ್ತಗಿರಿ ಮಾಡಿ ಕರೆದುಕೊಂಡು ಹಳಿಯಾಳದ ನಮ್ಮ ವಲಯ ಅರಣ್ಯಾಧಿಕಾರಿಗಳ ಕಂಪೌಂಡಿಗೆ ತಂದೆವು ಹಾಗೂ ನಮ್ಮ ವಲಯ ಅರಣ್ಯಾಧಿಕಾರಿ

ಮುಂದೆ ಹಾಜರುಪಡಿಸಿದೆವು. ಮೂರು ಜನರ ಆರೋಪಿತರ ಸ್ವಖುಷಿ ಹೇಳಿಕೆ ಪಡೆದೆನು ಆರೋಪಿತರು ತಾವು ಕಡಿದ ಸಾಗುವಾನಿ ಬುಡಚಿಗಳನ್ನು ತಮ್ಮ ಜೊತೆ ಬಂದರೆ ಕಡಿದ ಬುಡಚಿಗಳನ್ನು ತೋರಿಸುತ್ತೇವೆ. ಅಂತಾ ಹೇಳಿದ್ದರಿಂದ ಜಪ್ತಿ ಪಡಿಸಿದ ವಾಹನ ಹಾಗೂ ಆರೋಪಿತರೊಂದಿಗೆ ಕಡಿದ ಗಿಡಗಳ ಬುಡಚಿಯನ್ನು ನೋಡಿದೆವು. ಅವುಗಳು 10 ಬುಡಚಿಗಳು ಇದ್ದವು. ಸ್ಥಳದಲ್ಲಿ ಇದ್ದ ಬುಡಚಿಗೆ ಹಾಗೂ ಟೆಂಪೊದಲ್ಲಿ ಇದ್ದ ಸಾಗುವಾನಿ ತುಂಡುಗಳ ಒಂದಕ್ಕೊಂದು ಹೊಂದಾಣಿಕೆ ಕಂಡುಬಂದಿತು. ನಂತರ ಮೂರು ಜನ ಆರೋಪಿತರನ್ನು ಹಳಿಯಾಳ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಹಾಜರುಪಡಿಸಿರುವುದಾಗಿ ಸಾಕ್ಷಿಯನ್ನು ನುಡಿದಿರುತ್ತಾರೆ. ಅದರಂತೆ ಪಿಡಬ್ಲ್ಯೂ 2 ಮಾಲು ಜಪ್ತಿ ಪಂಚ, ಪಿಡಬ್ಲ್ಯೂ 3 ಬುಡಚಿ ಸ್ಥಳದ ಪಂಚ, ಪಿಡಬ್ಲ್ಯೂ 4 ಪ್ರತ್ಯಕ್ಷದರ್ಶಿ ಸಾಕ್ಷಿದಾರ ಪಿಡಬ್ಲ್ಯೂ 5 ತನಿಖಾಧಿಕಾರಿಗಳು ಸಹ ಅಭಿಯೋಜನೆಗೆ ಸಮರ್ಥಿಸಿ ಸಾಕ್ಷಿ ನುಡಿದಿರುತ್ತಾರೆ. ಈ ಎಲ್ಲಾ ಅಭಿಯೋಜನಾ ಸಾಕ್ಷಿದಾರ ಸಾಕ್ಷಿಗಳ ಮಧ್ಯ ಸಾಮ್ಯತೆ ಸಾಕ್ಷಿ ಇರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಪಿಡಬ್ಲ್ಯೂ 1 ರಿಂದ 6 ನೇಯವರು ಪ್ರಕರಣ ವಸ್ತು ಸ್ಥಿತಿಯನ್ನು ಸಮರ್ಥಿಸಿ ಸಾಕ್ಷಿ ನುಡಿದಿರುವುದು. ಸದರಿಯವರ ಮೌಖಿಕ ಸಾಕ್ಷಿದಿಂದ ಟೆಂಪೊ ನಂ.ಕೆಎ-25/7184 ನೇದನ್ನು ಗುನ್ನೆಯಲ್ಲಿ ಬಳಸಿರುವುದು ಸ್ಪಷ್ಟವಾಗಿ ಕಂಡು ಬರುವುದು. (ದಾಖಲಾತಿ ಸಾಕ್ಷಿಗಳು) ಇವರ ಸಾಕ್ಷಿ ಮತ್ತು ದಾಖಲಾತಿ ಸಾಕ್ಷಿಗಳ ಮಧ್ಯೆ ಹೊಂದಾಣಿಕೆ ಇರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಮತ್ತು ಅಭಿಯೋಜನೆ ಸಾಕ್ಷಿದಾರರ ಪರ ಮುಖ್ಯ ವಿಚಾರಣೆಯಲ್ಲಿ ಹೇಳಿದ ಸಾಕ್ಷ್ಯವನ್ನು ಅನರ್ಹಗೊಳಿಸುವಂತಹ ಸಾಕ್ಷಿ ಪಾಟಿ ಸವಾಲಿನಲ್ಲಿ ಕಂಡು ಬರುವುದಿಲ್ಲ.

ಅರ್ಜಿದಾರರ ಪರವಾಗಿ ಅವರ ವಕೀಲರು ವಾದ ಮಂಡಿಸಿ ಲಾರಿ ಮಾಲೀಕರು ಸದರ ಪ್ರಕರಣದಲ್ಲಿ ನೇರವಾಗಿ ಭಾಗವಹಿಸಲಿಲ್ಲಾ ಲಾರಿ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯವಾಗಿದೆ ಎಂದು ವಾದಿಸಿದರು. ಪಿಡಬ್ಲ್ಯೂ 1 ಇವರು ಪಾಟಿ ಸವಾಲಿನಲ್ಲಿ ವಾಹನ ಜಪ್ತಿ ಪಡಿಸಿದ ದಿನ ನಾನೇ ಚಾಲಕನಾಗಿದ್ದು ಜಪ್ತಿ ಪಡಿಸುವ ಕಾಲಕ್ಕೆ ಟೆಂಪೋದಲ್ಲಿ ಸಾಗುವಾನಿ ತುಂಡುಗಳು ಮತ್ತು ಸಾಗುವಾನಿ ಜಲಾವ ಇತ್ತು ಅನ್ನುವುದಾಗಿ ಒಪ್ಪಿಕೊಂಡಿರುತ್ತಾರೆ. ಈ ಮೇಲಿನ ಗುನ್ನೆಯ ನಿಜಾಂಶ ಮತ್ತು ವಾದಿ ಮತ್ತು ಪ್ರತಿವಾದಿಗಳ ಅಹವಾಲುಗಳನ್ನು ಆಲಿಸಿ ಜಪ್ತಿ ಮಾಡಿದ ಟೆಂಪೊ ನಂ. ಕೆಎ-25/7184 ನೇದರ ಪ್ರಕರಣದಲ್ಲಿ ನಿಶಾನೆ ಮತ್ತು ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಪ್ರತಿವಾದಿಗಳು ಟೆಂಪೊ ಮಾಲೀಕರು ನೇರವಾಗಿ ಗುನ್ನೆಯಲ್ಲಿ ಭಾಗವಹಿಸಲಿಲ್ಲಾ ಮತ್ತು ಜಪ್ತಿ ಮಾಡಿದ ಸಾಗ ಬಿಲೆಟ್ಸ್ 48=0.928 ಮತ್ತು ಸಾಗ ಜಲಾವ 3.000 ಘ.ಮೀ. ತಮ್ಮದೆಂದು ನಿರೂಪಿಸಲು ವಿಫಲರಾಗಿರುತ್ತಾರೆ. ಮತ್ತು ಗುನ್ನೆ ನಂಬರ್ 1ನೇ ಆರೋಪಿಯು ವಾಹನ ಮಾಲೀಕರ ಸಂಬಂಧಿಯಾಗಿದ್ದು ಇರುತ್ತದೆ. ಆದ್ದರಿಂದ ನನ್ನ ಮುಂದೆ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

1) ಟೆಂಪೊ ನಂ. ಕೆಎ-25/7184 ಅರಣ್ಯ ಅಪರಾಧದಲ್ಲಿ ಭಾಗಿಯಾಗಿದೆಯೋ ಹೇಗೆ?

2) ವಾಹನ ವಾರಸುದಾರರು ಅಥವಾ ಚಾಲಕರು ಬುದ್ಧ್ಯಪೂರ್ವಕವಾಗಿ ಗುನ್ನೆಯಲ್ಲಿ ಭಾಗಿಯಾಗಿದ್ದಾರೆಯೇ?

3) ವಾಹನದ ಮಾಲೀಕರು ವಾಹನವನ್ನು ಅಕ್ರಮ ನಾಟು ಹಾಗೂ ಅರಣ್ಯ ಉತ್ಪನ್ನಗಳನ್ನು ಸಾಗಿಸದ ಹಾಗೆ ನೋಡಿಕೊಳ್ಳಲು ಮುಂಜಾಗರತೆಗಳನ್ನು ತೆಗೆದುಕೊಂಡಿದ್ದಾರೆಯೇ?

4) ಗುನ್ನೆ ಪ್ರಕರಣದಲ್ಲಿ ಜಪ್ತಿ ಮಾಡಿದ ಸಾಗುವಾನಿ ತುಂಡುಗಳು ಯಾರಿಗೆ ಸೇರಿದ್ದು.

**ಪ್ರಶ್ನೆ ಸಂಖ್ಯೆ 1:-** ಹೌದು ಸದರ ಜಪ್ತಿ ವಾಹನವು ತತ್ವಣಗಿ ಎಫ್‌ಎಸ್ ನಂ.77ಎ ನೇದರಲ್ಲಿ ಅನಧಿಕೃತವಾಗಿ ಸಾಗುವಾನಿ ಬಿಲೆಟ್ಸ್ 448=0.023 ಘ.ಮೀ. ಹಾಗೂ ಜಲಾವ ಕಟ್ಟಿಗೆ 3.000 ಘ.ಮೀ. ಹೇರಿಕೊಂಡು ಕಳ್ಳಸಾಗಾಟ ಮಾಡುವಾಗ ಪತ್ತೆ ಹಚ್ಚಿ ಭಾಗ ವನಪಾಲಕ, ಹಳಿಯಾಳರವರು ಪ್ರಥಮ ವರದಿ ಸಂಖ್ಯೆ: 7/02-03, ದಿನಾಂಕ: 20.7.2002 ರಂದು ಜಪ್ತಿ ಪಡಿಸಿರುತ್ತಾರೆ.

**ಪ್ರಶ್ನೆ ಸಂಖ್ಯೆ 2:-** ಹೌದು, ಸಾಕ್ಷಿ, ಪುರಾವೆಗಳಿಂದ ಕಂಡುಬರುತ್ತದೆ.

**ಪ್ರಶ್ನೆ ಸಂಖ್ಯೆ 3:-** ಇಲ್ಲ, ಈ ಪ್ರಶ್ನೆಗೆ ಸಂಬಂಧಿಸಿದ ಹಾಗೆ ವಾಹನದ ಮಾಲೀಕರು ವಾಹನವನ್ನು ಅಕ್ರಮ ಅರಣ್ಯ ಉತ್ಪನ್ನಗಳನ್ನು ಸಾಗಾಣಿಕೆ ಮಾಡದ ಹಾಗೆ ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡಿದ್ದಾರೆಂದು ಸಾಬೀತು ಮಾಡಲು ವಿಫಲರಾಗಿದ್ದಾರೆ.

**ಪ್ರಶ್ನೆ ಸಂಖ್ಯೆ 4:-** ಟೆಂಪೊ ನಂ. ಕೆಎ-25/7184 ರಲ್ಲಿ ಜಪ್ತಿ ಮಾಡಿದ ಅರಣ್ಯ ಉತ್ಪತ್ತಿ ತನ್ನದೆಂದು ಸಾಧಿಸುವ ಯಾವುದೇ ಅಧಿಕೃತ ದಾಖಲಾತಿ ಪಾಸ ವ ಪರ್ಮಿಟ್ ಹಾಜರುಪಡಿಸಿರುವುದಿಲ್ಲವಾದ್ದರಿಂದ ಅದು ಸರಕಾರದ ಸೊತ್ತೆಂದು ನಿರ್ಣಯಿಸಿದೆ.

ಈ ಮೇಲಿನ ಎಲ್ಲಾ ವಿಷಯಗಳನ್ನು ಗಣನೆಗೆ ತೆಗೆದುಕೊಂಡು ಕೂಲಂಕುಷವಾಗಿ ಪರಿಶೀಲಿಸಿ ವಾಹನ ಸಂಖ್ಯೆ: ಟೆಂಪೊ ನಂ.ಕೆಎ-25/7184 ನೇರವಾಗಿ ಅರಣ್ಯ ಗುನ್ನೆಯಲ್ಲಿ ಭಾಗಿಯಾಗಿರುವುದರಿಂದ ಮನವರಿಕೆ ಆಗಿ (ಅದು ಸರಕಾರದ ಸೊತ್ತೆಂದು ಪರಿಗಣಿಸಿ) ಈ ಕೆಳಗಿನಂತೆ ಆದೇಶ ಹೊರಡಿಸಿರುತ್ತೇನೆ.

## ಆದೇಶ

ಈ ಮೇಲೆ ವಿವರಿಸಿದ ಅಂಶಗಳನ್ನು ಕಡತದೊಂದಿಗೆ ಪೂರ್ತಿಯಾಗಿ ಪರಿಶೀಲಿಸಿ ಕರ್ನಾಟಕ ಫಾರೆಸ್ಟ್ ಆ್ಯಕ್ಟ್ ಕ್ಕೆ 71(ಎ) ರಿಂದ (ಜಿ) ರನ್ವಯ ಈ ಗುನ್ನೆ ಪ್ರಕರಣದಲ್ಲಿ ಜಪ್ತಾದ ಟೆಂಪೊ ನಂ. ಕೆಎ-25/7184 ನೇದರ ಮಾಲೀಕರ ಸಂಬಂಧಿಕನು ಆರೋಪಿತನಾಗಿರುವುದರಿಂದ ವಾಹನ ಚಾಲಕನು ಬೂದ್ಧ್ಯಾಪೂರ್ವಕವಾಗಿ ಸಾಗ ಬಿಲೆಟ್ಸ್ 48=0.928 ಮತ್ತು ಸಾಗ ಜಲಾವ 3.000 ಘ.ಮೀ. ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿದ್ದು ರುಜುವಾತು ಆಗಿದ್ದು ನಾನು ರಾಮಚಂದ್ರ, ಭಾ.ಅ.ಸೇ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ ಹಳಿಯಾಳ, ಆದ ನಾನು ಭಾಗವನಪಾಲಕ, ಹಳಿಯಾಳ ಇವರ ಪ್ರಥಮ ವರದಿ ಸಂಖ್ಯೆ: 7/02-03, ದಿನಾಂಕ: 20.7.2002 ನೇದರಲ್ಲಿ ಜಪ್ತಿ ಮಾಡಿದ ವಾಹನ ಟೆಂಪೊ ನಂ. ಕೆಎ-25/7184 ಚಾರ್ಸಿ ನಂ.357010 ಜಿಯುಕ್ಯೂ-823626 ಇಂಜಿನ್ ನಂ.497 ಎಸ್‌ಪಿ 212 ಜಿಯುಕ್ಯೂ-764048 ಮತ್ತು ಅದರಲ್ಲಿದ್ದ ಸಾಗುವಾನಿ ಬಿಲೆಟ್ಸ್ 48=0.928 ಸಾಗ ಜಲಾವ 3.000 ಘ.ಮೀ.ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಹಾಗೂ ಸದರಿ ಸಾಗುವಾನಿ ತುಂಡು ಹಾಗೂ ಜಲಾವಗಳನ್ನು ಇಲಾಖಾ ಕಾನೂನು ಪ್ರಕಾರ ವಿಲೇ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಆದೇಶಿಸಿದೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ದಿನಾಂಕ: 28.02.2004 ರಂದು ತೆರೆದ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

ಈ ಆದೇಶ ವಿರುದ್ಧ ಮೇಲ್ಮನವಿ ಸಲ್ಲಿಸುವುದಾಗಲಿ ಈ ಆದೇಶ ಹೊರಡಿಸಿದ 30 ದಿನಗಳೊಳಗೆ ವಾಹನ ಮಾಲೀಕರು ಮೇಲ್ಮನವಿ ಸಲ್ಲಿಸದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

**ರಾಮಚಂದ್ರ, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

**ಅನುಬಂಧ - 1**

(1) ಅಭಿಯೋಜನಾ ವತಿಯಿಂದ ನುಡಿಸಿದ ಸಾಕ್ಷಿದಾರರ ವಿವರ

1) ಪಿಡಬ್ಲ್ಯೂ 1 - ಶ್ರೀ ಬಿ.ಆರ್. ಚಿಕ್ಕಮಠ
2) ಪಿಡಬ್ಲ್ಯೂ 2 - ಶ್ರೀ ಪ್ರಕಾಶ ಪ್ರಭು ನಾಯ್ಕ
3) ಪಿಡಬ್ಲ್ಯೂ 3 - ಶ್ರೀ ಬಾಬು ಸಂಕಪ್ಪಾ ಮಾದರ
4) ಪಿಡಬ್ಲ್ಯೂ 4 - ಶ್ರೀ ವಸಂತ ವೀರಭದ್ರ ಬಾಡಕರ
5) ಪಿಡಬ್ಲ್ಯೂ 5 - ಶ್ರೀ ರಾಜೀವ ದೇವರಾಯ ನಾಯ್ಕ

(2) ಅಭಿಯೋಜನಾ ವತಿಯಿಂದ ಗುರುತಿಸಿದ ದಾಖಲಾತಿಗಳ ವಿವರ

1) ಪ್ರಥಮ ವರ್ತಮಾನ ವರದಿ ದೃಢೀಕೃತ ಕಾರ್ಬನ್ ಪ್ರತಿ
2) ಎಫ್ಐಆರ್ ಮೇಲಿನ ಪಿಡಬ್ಲ್ಯೂ 1 ನೇದವರ ಸಹಿ
3) ಸೀಜರ್ ರಿಪೋರ್ಟ್ ದೃಢೀಕೃತ ಝರಾಕ್ಸ್ ಪ್ರತಿ
4) ಪಿಡಬ್ಲ್ಯೂ 1 ಇವರ ಸಹಿ
5) ಜಪ್ತಿ ಪಂಚನಾಮೆ ದೃಢೀಕೃತ ಝರಾಕ್ಸ್ ಪ್ರತಿ
6) ಪಿಡಬ್ಲ್ಯೂ 1 ನೇದರ ಸಹಿ
7) ಪಿಡಬ್ಲ್ಯೂ 2 ಪಂಚನ ಸಹಿ
8) ಪಿಡಬ್ಲ್ಯೂ 2 ಇವರ ಸಹಿ
9) ಪುರವಣಿ ಪಂಚನಾಮೆ
10) ಪಿಡಬ್ಲ್ಯೂ 1 ಇವರ ಸಹಿ
11) ಬುಡಚಿ ಸ್ಥಳದ ಹಾತ ನಕಾಶೆ
12) ಪಿಡಬ್ಲ್ಯೂ 1 ಇವರ ಸಹಿ
13) ವಾಹನ ಜಪ್ತಿ ಪಡಿಸಿದ ಕುರಿತು ಹಳಿಯಾಳ ಪಿಎಸ್ಐ ಯವರಿಗೆ ಬರೆದ ಪತ್ರ
14) ಪಿಡಬ್ಲ್ಯೂ 1 ಇವರ ಸಹಿ
15) ಜಪ್ತಿ ಪಡಿಸಿದ ಸಾಗ ಮಾಲಿನ ಪತ್ರ ಎಫ್ಐಆರ್ ನೊಂದಿಗೆ ಇದ್ದದ್ದು
16) ಪಿಡಬ್ಲ್ಯೂ 1 ಇವರ ಸಹಿ
17) ಪಿಡಬ್ಲ್ಯೂ 3 ಇವರ ಸಹಿ ಬುಡಚಿ ಪಂಚನಾಮೆ
18) ಜಪ್ತಿ ಪಂಚನಾಮೆ ಯಲ್ಲಿಯ ಪಿಡಬ್ಲ್ಯೂ 4 ಇವರ ಸಹಿ
19) ಬುಡಚಿ ಪಂಚನಾಮೆಯಲ್ಲಿಯ ಪಿಡಬ್ಲ್ಯೂ 4 ಇವರ ಸಹಿ
20) ಒಂದನೇ ಆರೋಪಿ ಸುಭಾಷ ಇತರ ಸ್ವಖುಷಿ ಹೇಳಿಕೆ
21) ಒಂದನೇ ಆರೋಪಿತನ ಸಹಿ (ಸ್ವಖುಷಿ ಹೇಳಿಕೆ)
22) ಒಂದನೇ ಆರೋಪಿತನ ಸ್ವಖುಷಿ ಹೇಳಿಕೆಯಲ್ಲಿಯ ಪಿಡಬ್ಲ್ಯೂ 5ನೇ ದವರ ಸಹಿ
23) 2ನೇ ಆರೋಪಿ ಮೋದಿನ ಸಾಬ ಈತನ ಸ್ವಖುಷಿ ಹೇಳಿಕೆ
24) 2ನೇ ಆರೋಪಿತನ ಸಹಿ (ಸ್ವಖುಷಿ ಹೇಳಿಕೆ)
25) ಪಿಡಬ್ಲ್ಯೂ 5ನೇ ದವರ ಸಹಿ (2ನೇ ಆರೋಪಿ ಸ್ವಖುಷಿ ಹೇಳಿಕೆ)
26) 3ನೇ ಆರೋಪಿ ಅಲ್ಲಾಭಕ್ಷ ಇತರ ಸ್ವಖುಷಿ ಹೇಳಿಕೆ
27) 3ನೇ ಆರೋಪಿತನ ಸಹಿ (ಸ್ವಖುಷಿ ಹೇಳಿಕೆ)
28) ಪಿಡಬ್ಲ್ಯೂ 5ನೇ ದವರ ಸಹಿ (3ನೇ ಆರೋಪಿ ಸ್ವಖುಷಿ ಹೇಳಿಕೆ)
29) ಕಿಮ್ಮತ್ತಿನ ಪತ್ರಿಕೆ
30) ಪಿಡಬ್ಲ್ಯೂ 5 ನೇದರ ಸಹಿ (ಕಿಮ್ಮತ್ತಿನ ಪತ್ರಿಕೆ)
31) ವಿಚಾರಣಾ ವರದಿ
32) ಪಿಡಬ್ಲ್ಯೂ 5 ನೇದವರ ಸಹಿ (ವಿಚಾರಣಾ ವರದಿ)

33) ಪಿಡಬ್ಲ್ಯೂ 5 ನೇದವರು ವಾಹನಕ್ಕೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿಯ ವಿವರ

34) ಪಿಡಬ್ಲ್ಯೂ 5 ನೇದವರ ಸಹಿ (ದೋಷಾರೋಪಣ ಪಟ್ಟಿಯ ಮೇಲೆ)

35) ಕಳ್ಳಸಾಗಾಣಿಕೆ ತಡೆಗಟ್ಟಲು ಕಾಳ ಭೈರವ ಕಾರ್ಯಾಚರಣೆಯಲ್ಲಿ ರಾತ್ರಿ ವಿಚಕ್ಷಣೆ ಮಾಡಿದ ಕುರಿತು.

36) ಪಿಡಬ್ಲ್ಯೂ ಡಿ ನೇದವರ ಸಹಿ (ಕಾಳ ಭೈರವ ಕಾರ್ಯಾಚರಣೆ ಪಟ್ಟಿಯ ಮೇಲೆ)

(3) 1) ಎಮ್‌ಓ 1 ಗೂಡ್ಸ್ ಟೆಂಪೊ ನಂಬರ್ ಕೆಎ-25/7184

2) ಎಮ್‌ಓ 2 - 47 ಸಾಗುವಾನಿ ತುಂಡುಗಳು

3) ಎಮ್‌ಓ 3 - ಸಾಗುವಾನಿ ಸಣ್ಣ ಸಣ್ಣ ಜಲಾವ ತುಂಡುಗಳು 3.000 ಘ.ಮೀ.

(4) ಅರ್ಜಿದಾರರ ಪರ ನುಡಿದ ಸಾಕ್ಷದ ವಿವರ

1) ಡಿಡಬ್ಲ್ಯೂ 1 ಸುಭಾಷ ಅಂದಾನಪ್ಪ ಕುಂಬಾರ, ಸಾ: ಯಾದವಾಡ

2) ಡಿಡಬ್ಲ್ಯೂ 2 ಹನುಮಂತಪ್ಪ ತಂತಿ ದೇವಪ್ಪಾ ಬದಾಮಿ, ಸಾ: ಉಣಕಲ

3) ಡಿಡಬ್ಲ್ಯೂ 3 ಉಳಿವಪ್ಪಾ ಶಿವಪ್ಪಾ ಕುಂಬಾರ ಸಾ: ಉಣಕಲ

(5) ಅರ್ಜಿದಾರರ ಪರ ಗುರುತಿಸಿದ ದಾಖಲಾತಿಗಳ ವಿವರ

1) Exp-D2

**ರಾಮಚಂದ್ರ, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

ಪಿ.ಆರ್. 758

**ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬಾಗಲಕೋಟೆ**

**ಅಧಿಸೂಚನೆ ಸಂಖ್ಯೆ: ತಾಸಕಅ:ಸಿಬ್ಬಂದಿ:ಕಮಾಪಹಅ:ಅ.ಪ್ರಕಟಣೆ:ಸಿಆರ್:2003-04, ದಿನಾಂಕ: 31ನೇ ಮಾರ್ಚ್ 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋಮಸ:02(1), ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದೆ. ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕಾ ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕಾ ಹಂತದಲ್ಲಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯು ತಾಲ್ಲೂಕಾ ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು - 1 ಹುದ್ದೆ

2) ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ

3) ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ

4) ಬೆರಳಚ್ಚುಗಾರರು - 1 ಹುದ್ದೆ

5) 'ಡಿ' ಗ್ರೂಪ್ ನೌಕರರು - 1 ಹುದ್ದೆ

ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರ ಈ ಕೆಳಗಿನಂತಿದೆ.

1) ಸಂಸ್ಥೆಗಳ ಯಾದಿ ಲಗತ್ತಿಸಿದೆ.

2) ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮತ್ತು ತಾಲ್ಲೂಕಾ ಮಟ್ಟದಲ್ಲಿ ಪ.ಜಾತಿ : ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನ ಸಹಾಯ.

2) ಕಾಲೇಜು ವಿದ್ಯಾರ್ಥಿ ನಿಲಯಗಳು. 3) ಮುರಾರ್ಜಿ ದೇಸಾಯಿ ವಸತಿ ಶಾಲೆಗಳು.

4) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ.

5) 1 ರಿಂದ 4ನೇ ತರಗತಿ ವಿದ್ಯಾರ್ಥಿವೇತನ. 6) ಮಹಿಳೆಯರಿಗೆ ತರಬೇತಿ ಕೇಂದ್ರ.

7) ಪ.ಜಾತಿ : ಪ.ವರ್ಗಗಳ ಜನರಿಗಾಗಿ ವಿದ್ಯಾರ್ಥಿನಿಲಯಗಳ ನಿರ್ಮಾಣ.

8) ಕಾಲೇಜು ವಿದ್ಯಾರ್ಥಿಗಳಿಗೆ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ.

9) ಪರಿಶಿಷ್ಟ ಜಾತಿ:ವರ್ಗದ ವಿದ್ಯಾರ್ಥಿ ನಿಲಯಗಳು. 10) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.

11) ಕಾನೂನು ಪದವೀಧರರಿಗೆ ಶಿಷ್ಯವೇತನ. 12) ವಿಶೇಷ ಘಟಕ ಯೋಜನೆಗೆ ಕೇಂದ್ರೀಯ ನೆರವು.

13) ಕಂಪ್ಯೂಟರ್ ತರಬೇತಿ. 14) ಜಾತಿ ಸಿಂಧುತ್ವ. 15) 6 ರಿಂದ 7ನೇ ತರಗತಿ ಬಾಲಕಿಯರಿಗೆ ಪ್ರೋತ್ಸಾಹ ಶಿಷ್ಯವೇತನ.

16) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹ ಧನ. 17) ಹೊಲಿಗೆ ಯಂತ್ರಗಳ ಸರಬರಾಜು.

18) ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ.

19) ಎಸ್‌ಎಸ್‌ಎಲ್‌ಸಿ:ಪಿಯುಸಿ:ಪದವಿ:ಸ್ನಾತಕೋತ್ತರ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.

20) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ.

21) ಅನೈರ್ಮಲ್ಯಕರ ವೃತ್ತಿಗಳಲ್ಲಿ ತೊಡಗಿರುವ ಪಾಲಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1) ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ತಾಲ್ಲೂಕಾ ಮಟ್ಟದಲ್ಲಿ ಎಲ್ಲಾ ವಿಭಾಗಗಳು ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು, ತಾಲ್ಲೂಕಾ ವಲಯದಲ್ಲಿ ಸಂಬಂಧಿಸಿದ ತಾಲ್ಲೂಕಾ ಪಂಚಾಯತ್‌ನ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು:** ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**3) ಕಛೇರಿ ಸಿಬ್ಬಂದಿ ವರ್ಗದವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು. ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥ ಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.

4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.

5) ಸರ್ಕಾರವು : ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಸಿಸುವುದು.

6) ಪ್ರತಿ ಮಾಹೆ ನಿಲಯ ಮೇಲ್ವಿಚಾರಕರ ಮಾಸಿಕ ಸಭೆ ಜರುಗಿಸುವುದು.

7) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.

3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಇಲಾಖೆಯಲ್ಲಿ ಮಂಜುರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 759 ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು, ಬಾಗಲಕೋಟೆ.

**DEPARTMENT OF CO-OPERATION**
**Office of the Assistant Registrar of Co-operative Societies,**
**I Circle, Chamarajpet, Bangalore-560 018**
**No. ARB/441/CON.2/2004-05, Bangalore, dated: 14th May 2004**

**Sub:** Confirmation for sale in CEP No.1275/2002-03, Decree No.DRB/DIS/2802/2001-02, dated: 08.08.2002, relates to the Janatha Seva Co-operative Bank Ltd., No.14, Rajatha Bhavan, Ist Main Road, RPC Layout, Vijayanagar, Bangalore-560 040.

**Ref:** Letter No. JSCB 1573/03-04 dated: 31.4.2004 from Sale Officer, attached Janatha Seva Co-operative Bank Ltd., No.14, Rajatha Bhavan, Ist Main Road, RPC Layout, Vijayanagar, Bangalore-560 040.

**PREAMBLE:**

The Sale Officer, Janatha Seva Co-operative Bank Ltd., No.14, Rajatha Bhavan, 1st main Road, RPC Layout, Vijayanagar, Bangalore-560 040 has conducted the sale in CEP No.1275/2002-03 and Decree No.DRBI/DIS/2802/2001-02, dated: 08.08.2002 at Subbaiahnapalya, Bangalore South Taluk and sold the under mentioned Immovable Property of Sri N.D.S. Stephen & Smt. Jessy Stephen due to the loan outstanding to the Janatha Seva Co-operative Bank Ltd., RPC Layout, Vijayanagar, Bangalore-560 040 and the said Immovable Property knocked down in public auction fixed on 22.10.2003 at Subbaiahnapalya, K.R. Puram Hobli, Bangalore in favour of Smt. V. Lalitha, W/o Varadaraj, residing at No.243, 3rd Main Road, 7th Cross, S.T. Bed Layout, 5th Block, Koramangala, Bangalore-560 034, for Rs.5,60,000/- (Rupees Five Lakhs Sixty Thousand Only) as there are no other highest bidder as per the report of the sale officer working in Janatha Seva Co-operative Bank Ltd., Hence the following orders.

**PROPERTY SCHEDULE**

| Town | Site No. | Extent | Assessment | Kind of Land |
|---|---|---|---|---|
| Subbaiahnapalya, K.R. Puram Hobli, Bangalore South. | No.96/69, Ward No.87, New No. KN-5. | Ground Floor, East to West- 50 Ft. North to South- $\frac{20+20.8}{2}$ | 5,52,750/- | Ground Floor of Constructed House |

**ORDER**

The said Immovable Property of 1. D.S. John Joshy 2. D.S. Jency Mary, represented minor by guardian father & Mother of Sri N.D.S. Stephen & Smt. Jessey Stephen, No.96/69, Ground Floor, Ward No.87, New No. K.N.5, Subbaiahnapalya, K.R. Puram Hobli, Bangalore South, which is mortgaged to the Janatha Seva Co-operative Bank Ltd., Vijayanagar, Bangalore-560 040, for having taken loan from the said Bank and default in Payment, the property have been sold at public Auction on 22.10.2003 in CEP:1275/2002-03 and decree No.DRBI/DIS/2802/2001-02 and knocked down in favour of Smt. V. Lalitha W/o Varadaraj, resident at No.243, 3rd Main Road, 7th Cross, S.T. Bed Layout, 5th Block, Koramangala, Bangalore-560 034, for Rs.5,60,000/- (Rupees Five Lakhs Sixty Thousand Only).

Hence the Sale conducted on 22.10.2003 is confirmed in favour of Smt. V. Lalitha W/o Varadaraj, No.243, 3rd Main Road, 7th Cross, S.T. Bed Layout, 5th Block Koramangala, Bangalore-560 034, who is the highest bidder as per rule 38 of KCS Rules 1960.

Given under my hand seal on this day of 14th May 2004.

**H.C. JOSHI**
Assistant Registrar of co-operative Societies,
I Circle, Chamarajpet, Bangalore-560 018.

**DEPARTMENT OF CO-OPERATION**
**Office of the Assistant Registrar of Co-operative Societies,**
**I Circle, Chamarajpet, Bangalore-560 018**
**SALE CONFIRMATION OF IMMOVABLE PROPERTY IN CEP.No.1275/2002-03 AND DECREE NO.DRBI/DIS/2802/2001-02, DATED: 08/08/2002, RULES 38(7) OF THE K.C.S. RULES 1960**

This is to certified that Smt. V. Lalitha W/o Varadaraj resident at No.243, 7th Cross Road, S.T. Bed Layout, 5th Block, Koramangala Bangalore-560 034, having purchased the right title and interest at public auction held by the Sale officer, Janatha Seva Co-operative Bank Ltd., No.14, Rajatha Bhavan, 1st Main Road, RPC Layout, Vijayanagar, Bangalore-560 040, on 22/10/2003. The under mentioned scheduled property sold for this arrears in CEP:No.1275/2002-03 and Decree No.DRBI/DIS/2802/2001-02 due from Sri ND.S. Stephen & Smt. Jessy Stephen residing at No.198, 5th Cross, Subbaiahnapalya, J.J. Nagar, Banasawadi, Bangalore-560 043, being the owner's of the under mentioned schedule property and the highest bid being stood in the name Smt. V. Lalitha, W/o. Varadaraj, residing at No.243, 3rd Main

Road, 7th Cross, S.T. Bed Layout, 5th Block, Koramangala, Bangalore-560 034. The Right title and interest of the scheduled property have been this day registered in the a name of Smt. V. Lalitha W/o Varadaraj, No.243, 3rd Main Road, 7th Cross, S.T. Bed Layout, 5th Block, Koramangala, Bangalore-560 034.

**SCHEDULE**

| Name of the District | Name of the Taluk | Village | Description of the Property |
|---|---|---|---|
| Bangalore | Bangalore South Taluk | No. 96/69, Ground Floor, Ward No.87, Subbaiahnapalya, New No.K.N.5, K.R. Puram Hobli, Bangalore South Taluk. | East to West-50.00 Ft. North to South $\frac{20+20.8}{2}$ (Constructed House) |

| Boundaries | | Date of Sale | Bid Amount | Remarks |
|---|---|---|---|---|
| East by: | 22 Feet Road. | 22.10.2003 | 5,60,000/- | Sale of Property have been confirmed vide their office order No. |
| West by: | Remaining portion of same property. | | | |
| North by: | Private property | | | |
| South by: | Remaining portion of same property. | | | |

Given under my hand Seal on this day of 14th May 2004.

**H.C. JOSHI**
Assistant Registrar of co-operative Societies,
P.R. 760 I Circle, Chamarajpet, Bangalore-560 018.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**
**ಸಂಖ್ಯೆ: ಎಫ್‌ಓಸಿ-ಸಿಓಎನ್-ಸಿಆರ್-5/2003-04, ದಿನಾಂಕ: 17ನೇ ಮೇ 2004**

**ಉಪಸ್ಥಿತರು:** ಶ್ರೀಮತಿ ಸೀಮಾ ಗರ್ಗ್, ಭಾ.ಆ.ಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.
**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ.
**ಅರ್ಜಿದಾರರು:** ಶ್ರೀ ಅಮಾನ್ ಸಾಬ್, ಹನುಮಂತಪ್ಪ ಶೆಡ್, ತರೀಕೆರೆ ರವರ ಪವರ್ ಆಫ್ ಅಟಾರ್ನಿ ಹೋಲ್ಡರ್,
ಜಬ್ಬಾರ್ ಸಾಬ್ ಬಿನ್ ಅಮೀರ್ ಸಾಬ್, ಬಿ.ಹೆಚ್. ರಸ್ತೆ, ರೈಲ್ವೆ ಸ್ಟೇಷನ್ ರಸ್ತೆ, ಭದ್ರಾವತಿ.

**ಪ್ರಸ್ತಾವನೆ:**

ದಿನಾಂಕ: 8.7.98 ರಂದು ವಲಯ ಅರಣ್ಯಾಧಿಕಾರಿ, ತರೀಕೆರೆ ಹಾಗೂ ಸಿಬ್ಬಂದಿ ವರ್ಗದವರು ತರೀಕೆರೆ ತಾಲ್ಲೂಕು, ಲಿಂಗದಹಳ್ಳಿ ಹೋಬಳಿ, ನಂದಿಬಟ್ಟಲು ಕಾಲೋನಿಯಿಂದ ವರ್ತೆಗುಂಡಿಗೆ ಹೋಗುವ ಮಧ್ಯಭಾಗದಲ್ಲಿರುವ 1996ನೇ ನೆಡುತೋಪು ಬಳಿ ಅಕ್ರಮವಾಗಿ ಸಾಗುವಾನಿ ಮರಗಳನ್ನು ಕಡಿದು ಲಾರಿಯಲ್ಲಿ ತುಂಬುತ್ತಿರುವಾಗ ಇಲಾಖಾ ಜೀಪನ್ನು ನೋಡಿ ಸುಮಾರು 15 ರಿಂದ 20 ಜನರಿದ್ದ ತಂಡವು ಓಡಲಾರಂಭಿಸಿದರು. ಈ ಸಮಯದಲ್ಲಿ ಬಂದೂಕಿನಿಂದ ಗಾಳಿಯಲ್ಲಿ 3 ಸುತ್ತು ಗುಂಡು ಹಾರಿಸಲಾಯಿತು. ಸದರಿ ಪ್ರದೇಶವು ಕತ್ತಲಾದ್ದರಿಂದ ಯಾರೂ ಸಹ ಕೈಗೆ ಸಿಗದೇ ಓಡಿ ಪರಾರಿಯಾಗಿರುತ್ತಾರೆ. ಮುಂದುವರೆದು ಲಾರಿಯನ್ನು ಪರಿಶೀಲಿಸಲಾಗಿ ಲಾರಿ ನಂ.ಕೆಎ-06-316 ಆಗಿದ್ದು, ಲಾರಿಯ ಒಳಭಾಗದಲ್ಲಿ 20 ಸಾಗುವಾನಿ ತುಂಡುಗಳಿರುತ್ತದೆ. ಸದರಿ ತುಂಡುಗಳಿಗೆ ಯಾವುದೇ ಇಲಾಖಾ ಛಾಪಾ ಗುರುತು ಕಂಡುಬಾರದೇ ಇದ್ದುದರಿಂದ ಸದರಿ ತುಂಡುಗಳು ಅಕ್ರಮವಾಗಿ ಸಾಗಾಣಿಕೆ ಆಗುತ್ತಿರುವುದು ಎಂದು ಖಚಿತಪಡಿಸಿಕೊಂಡು ಅಳತೆ ಮಾಡಿ ಇಲಾಖಾ ಛಾಪಾ ಹಾಕಿ ಕ್ರಮ ಸಂಖ್ಯೆ ಕೊಟ್ಟು ಸ್ಥಳದಲ್ಲೇ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 73/98-99ನ್ನು ದಾಖಲು ಮಾಡಿರುತ್ತಾರೆ. ಮುಂದುವರೆದು ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71-ಎ ಪ್ರಕಾರ ಕ್ರಮ ಜರುಗಿಸಲು ದಾಖಲಾತಿಗಳೊಂದಿಗೆ ಈ ನ್ಯಾಯಾಲಯಕ್ಕೆ ವರದಿ ಒಪ್ಪಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71(ಎ) ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪತ್ತಿಯನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ: 10.7.98 ರಂದು ವಾಹನದ ಮಾಲೀಕರು / ಅರ್ಜಿದಾರರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಲಯ ಅರಣ್ಯಾಧಿಕಾರಿ, ತರೀಕೆರೆ ಇವರು ವಶಪಡಿಸಿಕೊಂಡ ಲಾರಿ ನಂ. ಕೆಎ-06-316ರ ಮಾಲೀಕರು ಆಗಿರುತ್ತೇನೆ. ಸದರಿ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ವಾಹನವು ಕಛೇರಿ ಆವರಣದಲ್ಲಿರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ಹಾಳಾಗುವ ಸಾಧ್ಯತೆಯಿರುತ್ತದೆ. ಹಾಗೂ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ಆದ್ದರಿಂದ ನ್ಯಾಯಾಲಯವು ಸೂಕ್ತ ದಂಡ ವಿಧಿಸಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 30.7.98 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ದಿನಾಂಕ: 31.10.98 ರಂದು ಅರ್ಜಿದಾರರು ವಕೀಲರ ಮುಖಾಂತರ ಸಮಜಾಯಿಸಿ ನೀಡಿ ವಾಹನವನ್ನು ಡ್ರೈವರ್ ಬಾಡಿಗೆಗೆ ತೆಗೆದುಕೊಂಡು ಹೋಗಿರುತ್ತಾನೆ. ಆ ಸಮಯದಲ್ಲಿ ಅರಣ್ಯ ಇಲಾಖೆಯವರು ಖಾಲಿ ಲಾರಿಯನ್ನು ಹಿಡಿದು ಕೇಸನ್ನು ದಾಖಲು ಮಾಡಿರುತ್ತಾರೆ. ಯಾವುದೇ ಅರಣ್ಯ ಉತ್ಪನ್ನ ವಾಹನದಲ್ಲಿ ತುಂಬಿರುವುದಿಲ್ಲ. ವಾಹನದಿಂದಲೇ ಜೀವನ ಸಾಗುತ್ತಿದ್ದು, ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಸದರಿ ಪ್ರಕರಣದ ಬಗ್ಗೆ ಅಭಿಯೋಜನಾವತಿಯಿಂದ ಆಕ್ಷೇಪಣೆ ಸಲ್ಲಿಸಿ ವಾಹನದಲ್ಲಿ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆ ಆಗಿರುವುದು ಮೇಲುನೋಟಕ್ಕೆ ಕಂಡುಬಂದಿರುತ್ತದೆ. ಈ ಸಮಯದಲ್ಲಿ ವಾಹನವನ್ನು ವಾಹನದ ಮಾಲೀಕರಿಗೆ ಬಿಡುಗಡೆ ಮಾಡಿದಲ್ಲಿ, ಪುನಃ ಅಕ್ರಮ ಚಟುವಟಿಕೆಯಲ್ಲಿ ಭಾಗವಹಿಸುವ ಸಾಧ್ಯತೆಯಿರುತ್ತದೆ. ಆದ್ದರಿಂದ ವಾಹನವನ್ನು ಬಿಡುಗಡೆ ಮಾಡಬಾರದಾಗಿ ಮತ್ತು ಅರ್ಜಿದಾರರ ಮಧ್ಯಂತರ ಅರ್ಜಿಯನ್ನು ವಜಾ ಮಾಡಲು ವಿನಂತಿಸಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅರ್ಜಿದಾರರು ಮೇಲ್ಕಂಡ ವಾಹನವನ್ನು ಅರಣ್ಯ ಅಪರಾಧದಲ್ಲಿ ಭಾಗವಹಿಸಿರುವುದು ಮೇಲುನೋಟಕ್ಕೆ ಕಂಡು ಬಂದಿರುವುದರಿಂದ ಹಾಗೂ ಈ ಪ್ರಕರಣದಲ್ಲಿ ಪೂರ್ಣ ವಿಚಾರಣೆಯು ಅಗತ್ಯವಿರುವುದರಿಂದ ವಾಹನವನ್ನು ಬಿಡುಗಡೆ ಕೋರಿ ಸಲ್ಲಿಸಿರುವ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 5.12.99 ರಂದು ಆದೇಶ ಹೊರಡಿಸಿರುತ್ತದೆ.

ಮೇಲ್ಕಂಡ ಪ್ರಕರಣದ ಬಗ್ಗೆ ಈ ನ್ಯಾಯಾಲಯದಲ್ಲಿ 12.7.2000, 16.8.2000, 14.3.2001, 20.6.2001, 29.8.2001, 24.10.2001, 19.12.2001, 6.2.2002, 3.4.2002, 3.7.2002, 16.10.2002, 4.12.2002, 9.4.2003, 28.5.2003, 16.7.2003, 22.10.2003, 17.12.2003 ಹಾಗೂ 4.2.2004 ಅಂತಿಮ ಆದೇಶದ ಬಗ್ಗೆ ವಿಚಾರಣೆ ನಡೆಸಲು ವಾಹನದ ಮಾಲೀಕರಿಗೆ ನೋಟೀಸ್ ನೀಡಿರುತ್ತದೆ. ವಾಹನದ ಮಾಲೀಕರು ದಿನಾಂಕ: 19.12.2001 ಹಾಗೂ 3.4.2002 ರಂದು 2 ದಿನ ಮಾತ್ರ ವಿಚಾರಣೆಗೆ ನ್ಯಾಯಾಲಯದಲ್ಲಿ ಹಾಜರಾಗಿದ್ದು, ಬಾಕಿ ಉಳಿದ ದಿನಗಳಲ್ಲಿ ಗೈರುಹಾಜರಾಗಿರುತ್ತಾರೆ. ವಾಹನದ ಮಾಲೀಕರ ಪರ ವಕೀಲರು ಪದೇ ಪದೇ ಸಮಯಾವಕಾಶ ಕೋರಿರುತ್ತಾರೆಯೇ ವಿನಃ ಯಾವುದೇ ಸಾಕ್ಷಿದಾರರನ್ನು ಹಾಜರುಪಡಿಸಿರುವುದಿಲ್ಲ. ಸಹಾಯಕ ಸರ್ಕಾರಿ ಅಭಿಯೋಜಕರು 3 ಜನ ಸಾಕ್ಷಿದಾರರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ಸರ್ಕಾರದ ಪರವಾಗಿ ವಾದ ಮಂಡಿಸಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕುವ ಬಗ್ಗೆ ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ-1:**

ವಾಹನ ಲಾರಿ ಸಂಖ್ಯೆ: ಕೆಎ-06-316ನ್ನು ದಿನಾಂಕ: 8.7.1998 ರಂದು ಸಾಗುವಾನಿ ತುಂಡುಗಳು 20=3.765 ಎಂ3 ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ

**ಅಂಶ-2:**

ಅಂಶ-1 ರುಜುವಾತು ಆದರಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ವಾಹನದ ಛಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್ ರವರು ರುಜುವಾತು ಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತುಪಡಿಸಿರುತ್ತಾರೆಯೇ.

**ಅಂಶ-3:**

ಆದೇಶವೇನು?

**ಕಾರಣಗಳು**

**ಅಂಶ-1:**

ವಲಯ ಅರಣ್ಯಾಧಿಕಾರಿಗಳು, ತರೀಕೆರೆ ವಲಯ, ತರೀಕೆರೆ ಹಾಗೂ ಸಿಬ್ಬಂದಿವರ್ಗದವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ 8.7.98ರ ಪ್ರಥಮ ವರ್ತಮಾನದ ವರದಿ, ಸೀಜರ್ ರಿಪೋರ್ಟ್, ಸ್ಥಳ ಮಹಜರ್ ಹಾಗೂ ಅವರ ವರದಿಗಳಿಂದ ದಿನಾಂಕ: 8.7.98 ರಂದು ಬೆಳಗಿನ ಜಾವ 5.30ರ ವೇಳೆಗೆ ತರೀಕೆರೆ ತಾಲ್ಲೂಕು ಲಿಂಗದಹಳ್ಳಿ ಹೋಬಳಿ ನಂದಿಬಟ್ಟಲು ಕಾಲೋನಿಯಿಂದ ವರ್ತೆಗುಂಡಿಗೆ ಹೋಗುವ ಮಧ್ಯ ಭಾಗದಲ್ಲಿರುವ 1996ನೇ ನೆಡುತೋಪು ಬಳಿ ಅಕ್ರಮವಾಗಿ ಸಾಗುವಾನಿ ಮರಗಳನ್ನು ಕಡಿದು ಲಾರಿ ಸಂಖ್ಯೆ: ಕೆಎ-06-316 ರಲ್ಲಿ ತುಂಬುತ್ತಿರುವ ಸಮಯದಲ್ಲಿ ಇಲಾಖಾ ಜೀಪನ್ನು ನೋಡಿ ಸುಮಾರು 15 ರಿಂದ 20 ಜನರು ಓಡಿಹೋಗಲು ಗಾಳಿಯಲ್ಲಿ ಮೂರು ಸುತ್ತು ಗುಂಡು ಹಾರಿಸಲಾಯಿತು, ಅಪರಾಧಿಗಳು ಯಾರೂ ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ಲಾರಿಯ ಹತ್ತಿರ ಬಂದು ಪರಿಶೀಲಿಸಲಾಗಿ ಲಾರಿಯ ಒಳಭಾಗದಲ್ಲಿ ಹಾಗೂ ಲಾರಿಯ ಕೆಳಗೆ ಅಕ್ಕಪಕ್ಕ ಸಾಗುವಾನಿ ತುಂಡುಗಳು ಇದ್ದು ಅವುಗಳಿಗೆ ಯಾವುದೇ ಇಲಾಖಾ ಛಾಪಾ ವಗೈರೆ ಗುರುತು ಇಲ್ಲದ ಕಾರಣ ಕಳ್ಳಸಾಗಾಣಿಕೆ ಎಂದು ಖಚಿತಪಡಿಸಿಕೊಂಡು ಎಣಿಕೆ ಮಾಡಿದಾಗ ಒಟ್ಟು 20 ತುಂಡುಗಳು ಒಟ್ಟು ಪ್ರಮಾಣ 3.765 ಎಂ3 ಆಗಿರುತ್ತದೆ. ನಂತರ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 73/98-99ನ್ನು ದಾಖಲಾಯಿಸಿರುವುದು ದೃಢಪಟ್ಟಿರುತ್ತದೆ. ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಸಂಬಂಧಪಟ್ಟಂತೆ ಸರ್ಕಾರದ ಪರ ಅಮಾನತ್ತುಪಡಿಸಿದ ಲಾರಿ ಸಂಖ್ಯೆ: ಕೆಎ-06-316 ಹಾಗೂ ಸಾಗುವಾನಿ ತುಂಡುಗಳು 20=3.765 ಎಂ3ನ್ನು ಭೌತಿಕವಾಗಿ ಹಾಜರುಪಡಿಸಿರುವುದು ದಾಖಲಾತಿಗಳಿಂದ ತಿಳಿದುಬಂದಿದೆ. ಹಾಗೂ ದಿನಾಂಕ: 12.7.2000 ರಂದು ಶ್ರೀ ಫೈರೋಜ್ ಖಾನ್, ವನಪಾಲಕರು ದಿನಾಂಕ: 29.8.2001 ರಂದು ಶ್ರೀ ಎನ್.ಸಿ. ಶಿವಶಂಕರ, ವಲಯ ಅರಣ್ಯಾಧಿಕಾರಿ ಹಾಗೂ ದಿನಾಂಕ: 6.2.2001 ರಂದು ಸ್ವತಂತ್ರ ಸಾಕ್ಷಿದಾರರಾದ ಎಂ.ಎಸ್. ರುದ್ರಪ್ಪ ಇವರುಗಳು ಈ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿದ್ದು, ಮಹಜರ್‌ನಲ್ಲಿರುವ ಅಂಶಗಳಿಗೂ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದಕ್ಕೊಂದು ತಾಳೆ ಹೊಂದಿರುತ್ತದೆ. ಹಾಗೂ ಈ ಸಂಬಂಧ ಸ್ಥಳ ಮಹಜರನ್ನು ನಿಶಾನಿ ಪಿ-1 ಎಂದು ಸಾಕ್ಷಿಗಳ ರುಜುವನ್ನು ಕ್ರಮವಾಗಿ ಪಿ1ಎ, ಪಿ1ಬಿ ಹಾಗೂ ಪಿ1ಸಿ ಎಂದು ಗುರುತಿಸಿಕೊಂಡಿರುತ್ತಾರೆ. ಪ್ರಕರಣವನ್ನು ನೋಂದಾಯಿಸಿಕೊಂಡ ಬಗ್ಗೆ ದಾಖಲಿಸಿದ ಎಫ್‌ಐಆರ್‌ನ್ನು ನಿಶಾನೆ ಪಿ2 ಹಾಗೂ ಸಾಕ್ಷಿಯ ಸಹಿಯನ್ನು ಪಿ2ಎ ಎಂದು ಗುರುತಿಸಿಕೊಂಡಿರುತ್ತಾರೆ. ಸೀಜರ್ ರಿಪೋರ್ಟ್‌ನ್ನು ನಿಶಾನೆ ಪಿ3 ಹಾಗೂ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಿಕೊಂಡಿರುತ್ತಾರೆ. ಆದ್ದರಿಂದ ವಾಹನ ಲಾರಿ ಸಂಖ್ಯೆ: ಕೆಎ-06-316ನ್ನು ದಿನಾಂಕ: 8.7.98 ರಂದು ಸಾಗುವಾನಿ ತುಂಡುಗಳ ಕಳ್ಳಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಅರಣ್ಯ ಅಪರಾಧ ಪ್ರಕರಣ ದಾಖಲಾಗಿರುವುದು ದೃಢಪಟ್ಟಿದ್ದು ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಅಂಶ-2:

ಅರ್ಜಿದಾರ / ವಾಹನದ ಮಾಲೀಕರ ಪರವಾಗಿ ಅವರ ನ್ಯಾಯವಾದಿಗಳು ವಾಹನವನ್ನು ಬಿಡುಗಡೆ ಮಾಡಲು ದಿನಾಂಕ: 10.7.98 ರಂದು ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 71(ಬಿ) ಪ್ರಕಾರ ದಿನಾಂಕ: 30.7.98 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ಅವರ ವಕೀಲರ ಮುಖಾಂತರ 31.10.98 ರಂದು ಸಮಜಾಯಿಸಿ ನೀಡಿದ್ದು, ಪ್ರಕರಣದಲ್ಲಿ ವಾಹನವು ಭಾಗಿ ಆಗಿಲ್ಲ ಎಂಬುವ ಬಗ್ಗೆ ಮತ್ತು ವಾಹನದ ಮಾಲೀಕರ ಪಾತ್ರ ಇಲ್ಲದಿರುವ ಬಗ್ಗೆ ಯಾವುದೇ ವಿಚಾರವನ್ನು ಮಂಡಿಸಿರುವುದಿಲ್ಲ. ಅಲ್ಲದೇ ಯಾವುದೇ ದಾಖಲಾತಿಗಳು ಸಾಕ್ಷಿದಾರರನ್ನು ಸಹ ಹಾಜರುಪಡಿಸಿರುವುದಿಲ್ಲ.

ವಾಹನದ ಮಾಲೀಕರಿಗೆ ಈ ನ್ಯಾಯಾಲಯದಲ್ಲಿ ವಿಚಾರಣೆಗೆ ಹಾಜರಾಗಲು ಅನೇಕ ಬಾರಿ ನೋಟೀಸ್ ನೀಡಿದ್ದರೂ ಸಹ ದಿನಾಂಕ: 3.4.2002 ರಂದು ಮಾತ್ರ ನ್ಯಾಯಾಲಯಕ್ಕೆ ಹಾಜರಾಗಿರುತ್ತಾರೆ. ಅವರ ಪರ ವಕೀಲರು ವಿಚಾರಣೆ ನಡೆಸಿ ಹೇಳಿಕೆ ಪಡೆದಿರುತ್ತಾರೆ. ಅವರ ಹೇಳಿಕೆ ಪ್ರಕಾರ ಕೆಎ-06-316 ಲಾರಿಯ ಮಾಲೀಕನಾಗಿರುತ್ತೇನೆ. ದಿನಾಂಕ: 7.7.98 ರಂದು 2 ದಿವಸ ಬೆಂಗಳೂರಿಗೆ ಹೋಗಿದ್ದೆ, ಆ ಸಮಯದಲ್ಲಿ ಈ ಕೃತ್ಯವು ನಡೆದಿರುತ್ತದೆ. ವಾಹನದ ಅಸಲು ಆರ್.ಸಿ. ಪುಸ್ತಕ ಇರುವುದಿಲ್ಲ. ಈ ಸಂಬಂಧ ಬಿ-ಎಕ್ಸ್‌ಟ್ರಾಕ್ಟ್ ಹಾಜರುಪಡಿಸಿರುತ್ತಾರೆ. ಸದರಿ ಬಿ-ಎಕ್ಸ್‌ಟ್ರಾಕ್ಟನ್ನು ನಿಶಾನೆ ಪಿ1 ಎಂದು ಗುರುತಿಸಿರುತ್ತದೆ. ಸರ್ಕಾರದ ಪರ ಅಭಿಯೋಜನಾವತಿಯಿಂದ ಮಾಡಬೇಕಾದ ಪಾಟೀ ಸವಾಲಿಗೆ ಅರ್ಜಿದಾರರು ಗೈರುಹಾಜರಾಗಿದ್ದು ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಗಿದೆ. ಈ ಪ್ರಕರಣದ ಬಗ್ಗೆ ಅರ್ಜಿದಾರರು ಹಾಗೂ ಅವರ ಜಿ.ಪಿ.ಎ.ಗೆ ನ್ಯಾಯಾಲಯಕ್ಕೆ ಹಾಜರಾಗಲು ನೋಟೀಸನ್ನು ಭದ್ರಾವತಿ ವಲಯ ಅರಣ್ಯಾಧಿಕಾರಿ ಮುಖಾಂತರ ಜಾರಿ ಮಾಡಿದಾಗ ವಾಹನದ ಮಾಲೀಕ ಅಮಾನ್ ಸಾಬ್ ದಿನಾಂಕ: 13.6.2002 ರಂದು ಮೃತಪಟ್ಟಿರುವುದು ತಿಳಿದುಬಂದಿರುತ್ತದೆ. ಅರ್ಜಿದಾರರ ಪರ ಜಿ.ಪಿ.ಎ. ಆದ ಜಬ್ಬಾರ್ ಸಾಬ್ ಬಿನ್ ಅಮೀರ್ ಸಾಬ್ ಇವರಿಗೆ ನೋಟೀಸ್ ಜಾರಿ ಮಾಡಿ ನ್ಯಾಯಾಲಯಕ್ಕೆ ಹಾಜರಾಗಲು ತಿಳಿಸುವ ಸಮಯದಲ್ಲಿ ಜಬ್ಬಾರ್ ಸಾಬ್ ಈ ನ್ಯಾಯಾಲಯದಲ್ಲಿ ನೀಡಿದ ವಿಳಾಸದಲ್ಲಿರುವುದಿಲ್ಲ. ಈ ಬಗ್ಗೆ ಸ್ಥಳ ಮಹಜರ್ ನಡೆಸಿ ವರದಿಯನ್ನು ಒಪ್ಪಿಸಿರುತ್ತಾರೆ. ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರಿಗೆ ವಾಹನಕ್ಕೆ ಸಂಬಂಧಿಸಿದ ವಾರಸುದಾರರನ್ನು ಹಾಜರುಪಡಿಸಲು ಸೂಚಿಸಿದರೂ ಸಹ ಪದೇ ಪದೇ ಸಮಯಾವಕಾಶ ಕೋರಿರುತ್ತಾರೆಯೇ ವಿನಃ ಯಾವ ಸಾಕ್ಷಿದಾರರನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಅವರ ಕೋರಿಕೆಯನ್ನು ತಿರಸ್ಕರಿಸಿರುತ್ತದೆ.

ಅರ್ಜಿದಾರರು ಲಾರಿ ಸಂಖ್ಯೆ: ಕೆಎ-06-316ನ್ನು ಸರ್ಕಾರದ ಸೊತ್ತಾದ ಸಾಗುವಾನಿ ಮರಗಳನ್ನು ಕಡಿದು ತುಂಡುಗಳಾಗಿ ಪರಿವರ್ತಿಸಿ 20=3.765 ಎಂ3 ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನ ಮಾಲೀಕರು ಪರೋಕ್ಷವಾಗಿ ಭಾಗಿಯಾಗಿದ್ದರೆಂಬುದು ಸಾಕ್ಷ್ಯಾಧಾರಗಳಿಂದ ರುಜುವಾತಾಗಿರುತ್ತದೆ. ವಾಹನದ ಮಾಲೀಕರಾಗಲೀ ಅಥವಾ ವಾಹನದ ಮಾಲೀಕರು ನೇಮಿಸಿದ ಏಜೆಂಟರಾಗಲೀ ಅಥವಾ ವಾಹನ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ವ್ಯಕ್ತಿಯಾಗಲೀ ಈ ಕೃತ್ಯದಲ್ಲಿ ಭಾಗಿಯಾಗಿಲ್ಲ ಹಾಗೂ ತಮ್ಮ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆ ಎಂಬುದನ್ನು ಹಾಗೂ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇನೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಾಧಿಕಾರದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಜಿ.ಪಿ.ಎ ದಾರರ ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ಲಾರಿಯನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ.

ಈ ಪ್ರಕರಣದಲ್ಲಿ ಅರ್ಜಿದಾರರು / ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿದ್ದರೂ ಸಹ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಅಲ್ಲದೇ ಅವರ ಪರ ವಕೀಲರು ಸಹ ಈ ನ್ಯಾಯಾಲಯದಿಂದ ಸಾಕಷ್ಟು ಸಮಯಾವಕಾಶ ಕೊಟ್ಟರೂ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಮೇಲೆ ಹೇಳಲಾದ ವಾಹನವನ್ನು ನೇರವಾಗಿ ಅರಣ್ಯ ಉತ್ಪನ್ನ ಅಕ್ರಮ ಕಳ್ಳ ಸಾಗಾಣಿಕೆಗೆ ಬಳಸಿರುವುದು ಈ ಪ್ರಕರಣದ ವಿಚಾರಣೆಯಿಂದ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ದೃಢಪಟ್ಟಿರುತ್ತದೆ. ಆದ್ದರಿಂದ ಅಂಶ-2ನ್ನು ಇಲ್ಲ ಎಂದು ಪರಿಗಣಿಸಲಾಯಿತು.

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅಂಶ-3ಕ್ಕೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ (2)ನೇ ತಿದ್ದುಪಡಿ ಪ್ರಕಾರ ಲಾರಿ ನೋಂದಾವಣೆ ಸಂಖ್ಯೆ: ಕೆಎ-06-316ನ್ನು (ಇಂಜಿನ್ ನಂ. ಎವಿಎಲ್‌ಇಪಿ-120441, ಛಾಸ್ಸಿ ನಂ. ಎವಿಎಲ್‌ಇಪಿ 243027) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಸಾಗುವಾನಿ ತುಂಡುಗಳು 20=3.765 ಎಂ3ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಸಾಗುವಾನಿ ತುಂಡುಗಳನ್ನು ಕಾನೂನು ರೀತ್ಯ ವಿಲೇ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 17.5.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

**ಅನುಬಂಧ**

1) ಫಿರ್ಯಾದಿದಾರರ ಸಾಕ್ಷಿಗಳ ವಿಚಾರಣೆ

- ಸಿ) ಪಿಡಬ್ಲ್ಯೂ 1 ಫೈರೋಜ್ ಖಾನ್, ವನಪಾಲಕ, ತಣಿಗೆಬೈಲು, ಲಕ್ಕವಳ್ಳಿ ವಲಯ
- ಬಿ) ಪಿಡಬ್ಲ್ಯೂ 2 ಎನ್.ಸಿ. ಶಿವಶಂಕರ್, ವಲಯ ಅರಣ್ಯಾಧಿಕಾರಿ, ಅಜ್ಜಂಪುರ ವಲಯ
- ಸಿ) ಪಿಡಬ್ಲ್ಯೂ 3 ಎಂ.ಎಸ್. ರುದ್ರಪ್ಪ, ವ್ಯವಸಾಯಗಾರರು, ಬಳ್ಳಾವರ ಗ್ರಾಮ

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ:**

1. ಪಿ1 ಸ್ಥಳ ಮಹಜರ್-
2. ಪಿ1ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
3. ಪಿ1ಬಿ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ
4. ಪಿ1ಸಿ ಪಿಡಬ್ಲ್ಯೂ 3 ಸಾಕ್ಷಿದಾರರ ಸಹಿ
5. ಪಿ1ಸಿ ಪ್ರಥಮ ಮಾಹಿತಿ ವರದಿ
6. ಪಿ2ಎ ಫಿರ್ಯಾದಿದಾರರ ಸಹಿ
7. ಪಿ3 ಸೀಜರ್ ರಿಪೋರ್ಟ್
8. ಪಿ3ಎ ಫಿರ್ಯಾದಿದಾರರ ಸಹಿ

**ಎಕ್ಸ್‌ಬಿಟ್-1**

ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ

**ಎಕ್ಸ್‌ಬಿಟ್-2**

ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ: 5.12.98

2) ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ:

ಎ) ಲಾರಿ ನಂ. ಕೆಎ-06-316ಕ್ಕೆ ಸಂಬಂಧಿಸಿದ ಬಿ ಎಕ್ಸ್ ಟ್ರಾಕ್ಟ್ ಡಿ1

**ಸೀಮಾ ಗರ್ಗ್**

ಪಿ.ಆರ್. 761 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

## OFFICE OF THE DEPUTY COMMISSIONER OF COMMERCIAL TAXES (ASSESSMENTS-15), CITY DIVISION-I, GANDHINAGAR, BANGALORE
## KST No: 0090351-6, CST No: 0095351-9

**Sub:** Loss of 'C' Forms - reg.

It is brought to the notice of all those concerned that this office has issued 'C' forms to M/s Mangam Enterprises, No.37, Main Channel Road, Ulsoor, Bangalore-8 bearing KST No.0090353-0 and CST No.0095353-2 and they have reported that they have lost 1 'C' form, the details are as under:

| Sl.No. | 'C' Form No./Date | To whom 'C' Forms were issued | Amount Involved |
|---|---|---|---|
| 1. | TCK 0682353 26.03.2003 | M/S. Ayyan Fireworks Factory Pvt. Ltd., Sivakasi. | Rs. 17,47,626.00 |

The above said 'C' forms issued for Rs.17,47,626-00, as the undersigned has declared that the said form as obselete. If anybody finds the above form may surrender the same to the Deputy Commr. of Comml. Taxes, (Assessments-15), Bangalore. The details are as follows:-

**FORMAT**

| | | |
|---|---|---|
| 1. | Assessing Authority | Deputy Commr. of Comml. Taxes, (Assessments-15), III Floor, Kheny Building, Gandhinagar, BANGALORE. |
| 2. | Description of Forms | 'C' Form declaration |
| 3. | Machine Sl.No. of the 'C' Forms | TCK 0682353 |
| 4. | Dealer to whom the forms issued | M/S Ayyan Fireworks Factory Pvt. Ltd., Sivakasi |
| 5. | KST and CST Number | 0090353-0/0095353-2 |
| 6. | Date of report of loss received in the Office of the Assessing Authority | 22.09.2003 |
| 7. | How lost/theft, destruction or in transit | Lost while in transit. |

**D. KUMARASWAMY**

Deputy Commissioner of Commercial Taxes
P.R. 762 (Assessments-15) City Division-I, Bangalore-9.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಹರಿಯಟ್ ಇಂದಿರಾ ಜಯಶೀಲ, ಶುಶ್ರೂಷಕಿ, ಮಾನಸಿಕ ಆರೋಗ್ಯ ಮತ್ತು ನರ ವಿಜ್ಞಾನ ಸಂಸ್ಥೆ, ಬೆಂಗಳೂರು.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(1) ಸಿಆರ್:20:89-90, ದಿನಾಂಕ: 19.9.2000.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್ (1) ಸಿಆರ್:20:89-90, ದಿ: 20.7.2001.
3) ವಿಚಾರಣಾ ವರದಿಯ ಸಂಖ್ಯೆ: ಮುಜಅ:ಜಾಕೋ:ಎನ್‌ಬಿ:34:2001-02, ದಿನಾಂಕ: 8.10.2003.

**ಪ್ರಸ್ತಾವನೆ:**

ಶ್ರೀಮತಿ ಹರಿಯಟ್ ಇಂದಿರಾ ಜಯಶೀಲ, ಶುಶ್ರೂಷಕಿ, ಈ ಹಿಂದೆ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 6.8.84 ರಿಂದ ದಿನಾಂಕ: 15.6.89 ರವರೆಗೆ ಅಧಿಕೃತವಾಗಿ ಗೈರು ಹಾಜರಾಗಿದ್ದು ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು,

(ಜಾಗೃತಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸಲ್ಲಿಸಿದ್ದಂತೆ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್:20:1989-90, ಬೆಂಗಳೂರು, ದಿನಾಂಕ: 12ನೇ ಮೇ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಹರಿಯಟ್ ಇಂದಿರಾ ಜಯಶೀಲ, ಶುಶ್ರೂಷಕಿ, ಇವರ ಗೈರು ಹಾಜರಿ ದಿನಾಂಕ: 6.8.64 ರಿಂದ ದಿನಾಂಕ: 15.6.89 ರವರೆಗಿನ ಅವಧಿ ವಿಚಾರಣೆಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದ್ದೇನೆ.

ಡಾ: ಜಿ.ಬಿ. ದೇಸಾಯಿ

ಪಿ.ಆರ್. 763 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**IN THE COURT OF COMMISSIONER FOR WORKMEN'S COMPENSATION BIDAR**

**No: LOB/WCA/Cr-22/2004**

| **APPLICANTS:** | **V/S** | **RESPONDENTS** |
|---|---|---|
| Bheemsha S/o Nagappa Mailasur age 50 years | 1) | Raghunath Reddy S/o Hemareddy age |
| Occ Labour R/o Gangapalli | | Majar Occ Business R/o Chincholi, Gulbrga |
| Now at - Kadwad Bidar and others | | New India Assurance Co. limited, Gulbarga. |

**PROCLAMATION**

Sri Bheemshah F/o Bandigeppa, R/o Kadwad Taluk, Bidar has filed application in this court claiming compensation stating that Late: Bandigappa was working as Driver under the Respondent No.I he met with an accident arising out of and during the course of employment as a result he died on:10.12.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications on objections are received within the specified date the court will proceeded further in the matter.

P.R. 764 Commissioner For Workmen's Compensation, Bidar.

**PROCEEDINGS OF THE REGISTERING AUTHORITY AND REGIONAL TRANSPORT OFFICER: INDIRANAGAR:BANGALORE (EAST):BANGALORE-38**

**Present:** Afzal Ahmed Khan,
Regional Transport Officer & Registering Authority, Indiranagar, Bangalore(East).

**Sub:** Cancellation of registration certificate in respect of M.V.No. KA-30-531 Maxi cab-Reg.

**Ref:** Application Dated: 31.03.2004 from the R/O

**PREAMBLE:**

The M.V.No. KA-30-531 Maxi cab stands registered in the name of Sri R. Kumara swamy, Cox town, Bangalore-05. The registered owner has intimated and submitted the documents to this office voluntarily on 31.03.2004, stating that the vehicle is under major repairs and he is not interested to operate this M.V. in these conditions and he is requested to the authority for cancellation of registration certificate. The tax paid upto: 30.04.2004.

In view of the above facts I pass the:

**ORDER No. RTO.BNG.E.RGN/TR.PR. /KA-30-531/2003-04, dated: 24th April 2004**

In exercise of the powers vested under Sec.55(1) of the Motor Vehicle Act. 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of the KA-30-531 Maxi cab w.e.f. 24.04.2004 as desired by the R/o without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1 | M.V.NO. | KA-30-531 |
| 2 | Class of Vehicle | MAXI CAB |
| 3 | Type of Body | CLOSED |
| 4 | Chassis No. | FJ470DS42WDS4005370 |

| | | |
|---|---|---|
| 5 | Engine No. | J4005370 |
| 6 | Year of Manufacture | 1991 |

**AFZAL AHMED KHAN**
Regional Transport Officer & Registering Authority,
P.R. 765 Indiranagar, Bangalore (East).

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ವಿಶ್ವಕರ್ಮ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ/88/2003-04, ದಿನಾಂಕ: 15.04.2004.

2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/160/77-78, ದಿ: 27.10.1977.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಬಿ/ 145/65-66, ದಿನಾಂಕ: 22.1.1966 ರಲ್ಲಿ ನೋಂದಣಿಯಾದ ವಿಶ್ವಕರ್ಮ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/160/2004-05, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ವಿಶ್ವಕರ್ಮ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ/145/65-66, ದಿನಾಂಕ: 22.1.1966ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 766 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು 52**

**ವಿಷಯ:** ಸಮಾಪನೆಯಲ್ಲಿರುವ ದೊಡ್ಡಬಳ್ಳಾಪುರ ಟೌನ್ ಮುಸ್ಲಿಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47/ಸಮಾಪನೆ/88/2003-04, ದಿನಾಂಕ: 15.04.2004.

2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/53/97-98, ದಿ: 27.07.2000.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಡಿ/ 227/78-79, ದಿನಾಂಕ: 24.10.1979 ರಲ್ಲಿ ನೋಂದಣಿಯಾದ ದೊಡ್ಡಬಳ್ಳಾಪುರ ಟೌನ್ ಮುಸ್ಲಿಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿರುವುದಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು

ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/53/2004-05, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ಸಿಎಲ್ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ದೊಡ್ಡಬಳ್ಳಾಪುರ ಟೌನ್ ಮುಸ್ಲಿಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ/227/78-79, ದಿನಾಂಕ: 24.10.1979ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 767 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಮುನ್ಸಿಪಾಲ್ ವರ್ಕರ್‍ಸ್ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ/88/2003-04, ದಿನಾಂಕ: 15.04.2004.

2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/136/96-97, ದಿ: 27.07.1996.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಬಿ/ 1326/62-63, ದಿನಾಂಕ: 24.8.1963 ರಲ್ಲಿ ನೋಂದಣಿಯಾದ ಮುನ್ಸಿಪಲ್ ವರ್ಕರ್‍ಸ್ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/136/2004-05, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ಸಿಎಲ್ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಮುನ್ಸಿಪಲ್ ವರ್ಕರ್‍ಸ್ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ/1326/62-63, ದಿನಾಂಕ: 24.8.1963ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 768 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ದೊಡ್ಡಬಳ್ಳಾಪುರ ತಾಲ್ಲೂಕು ಕಾಟನ್ ಪವರ್ ಲೂಂ ನೇಕಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ/88/2003-04, ದಿನಾಂಕ: 15.04.2004.

2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/34/84-85, ದಿ: 25.04.1984.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಬಿ/ 789/58-59, ದಿನಾಂಕ: 29.11.1958 ರಲ್ಲಿ ನೋಂದಣಿಯಾದ ದೊಡ್ಡಬಳ್ಳಾಪುರ ತಾಲ್ಲೂಕು ಕಾಟನ್ ಪವರ್ ಲೂಂ ನೇಕಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/34/2003-04, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ದೊಡ್ಡಬಳ್ಳಾಪುರ ತಾಲ್ಲೂಕು ಕಾಟನ್ ಪವರ್ ಲೂಂ ನೇಕಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ/ 789/58-59, ದಿನಾಂಕ: 29.11.1958ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 769 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಜನತಾ ಬಳಕೆದಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ/88/ 2003-04, ದಿನಾಂಕ: 15.04.2004.

2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/197/77-78, ದಿ: 01.11.1977.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಬಿ/ 324/65-66, ದಿನಾಂಕ: 16.6.1965 ರಲ್ಲಿ ನೋಂದಣಿಯಾದ ಜನತಾ ಬಳಕೆದಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/197/2004-05, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಜನತಾ ಬಳಕೆದಾರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ/ 324/65-66, ದಿನಾಂಕ: 16.6.1965ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 770 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.